ಹರಾಮರ್ಶಗಾನಿ

# ಗೋವಿಜಯ

(ಗೋವಿನ ಕಥೆ)

* *

ಕೆ. ಮುಖ್ಯಪ್ರಾಣ ಉಪಾಧ್ಯಾಯ

ಅಂಬಲ್ಪಾಡಿ ಶಾಲಾ ಮಾಸ್ತರ್.

1956

ಗ ಎಂಟರ್‌ಪ್ರೈಸ್ ಲಿಮಿಟೆಡ್,

ಯುಗ ಪ್ರೆಸ್, ಉಡುಪಿ.

8K3·6
MUK

# ಮುನ್ನುಡಿ

(ಮೊದಲ ಮುದ್ರಣ)

ಓ ಬಾಲಭಾಷಾಭಿಮಾನಿಗಳೇ!

ಇದೊಂದು ಅಪೂರ್ವ ಪುಸ್ತಕವು. ಮಕ್ಕಳ ಕೈಯಲ್ಲಿ ಈ ತೆರನಾದ ಪ್ರಸಂಗ ಪುಸ್ತಕಗಳನ್ನು ಕಂಡು ಸಂವತ್ಸರಗಳ ಒಂದು ಪರಿವರ್ತನವೇ ಆಗಿಹೋಗಿರಬೇಕೆನ್ನಬಹುದು. ಮಾರ್ಪಟ್ಟುದು ಯಾವಾಗಲೂ ತನ್ನ ಹಳೆಯ ಸ್ಥಿತಿಯನ್ನು ಒಂದು ಕಾಲದಲ್ಲಿ ತಿರುಗಿ ಹೊಂದುವುದು ಆಶ್ಚರ್ಯವಾದ ವಿಷಯವಲ್ಲ.

*　　*　　*　　*

ಹಳೆದು ಹೊಸದು ಎಂಬ ವಿಚಾರವಲ್ಲ. ಹಳೆದರಲ್ಲಿ ಆದರಿಸಲಿರುವ ಉಪಕಾರಕ್ಕೆ ಬೀಳುವ ಸಂಗತಿಯನ್ನು ಎತ್ತಿ ಹಿಡಿದಿರುವುದು ಅಸಂಗತವೆನ್ನಲಾದೀತೇ? ಎಲಿಮೆಂಟರಿ ಶಾಲೆಗಳ ಮಕ್ಕಳು ೯೦ರಷ್ಟು ಹಳ್ಳಿಯವರು. ಇವರಲ್ಲಿ ೧೦ರಷ್ಟು ಪ್ರೌಢವಿದ್ಯೆಗೆ ಬರುವವರು. ಮಿಕ್ಕಾದವರು IV ಯಾ V ಹೆಚ್ಚೆಂದರೆ VIII ಕ್ಲಾಸಿನಲ್ಲಿ ಬಿಡುವವರು. ಇವರಿಗೆ ಸರಿಯಾದ ದೇಶೀಯ ಭಾಷಾಜ್ಞಾನವೂ, ನಿಷ್ಕಂಪದಿಂದ ಮಾತನಾಡುವ (ಭಾಷಣ ಕೊಡುವ) ಶಕ್ತಿಯೂ ಉಂಟಾಗಬೇಕಾದರೆ ಅದು ಪ್ರಸಂಗ, ಅರ್ಥಗಳ ಕ್ರಮದಿಂದಲೇ ಬರಬೇಕು. ಇದು ಬಯಲಾಟವನ್ನು ನೋಡುತ್ತಿರುವವರಲ್ಲಿ ಒಂದು ವಿಧದಿಂದ ಅಸ್ತವ್ಯಸ್ತವಾಗಿ ಎಲ್ಲಾ ಮಕ್ಕಳಲ್ಲಿಯೂ ಮುಕ್ಕಾಲು ಪಾಲು ಇದ್ದೇ ಇದೆ. ಅದನ್ನೇ ಶಾಲೆಯಲ್ಲಿ ಸರಿಪಡಿಸಿಕೊಟ್ಟರೆ ಮಕ್ಕಳಿಗೆ ಭಾಷಾಭ್ಯಾಸವು ಆದಂತೆಯೇ ಸರಿ. ಆದುದರಿಂದ ಹಳ್ಳಿಯ ಮಕ್ಕಳಿಗೆ ಇದರಷ್ಟು ಉಪಯೋಗವು ಬೇರೆ ಇರದು. ೧೦, ೯೦ನ್ನು ಹಿಂಬಾಲಿಸಬೇಡವೇ?

*　　*　　*　　*

ಆಡಿ, ಓಡಿ, ನಲಿದು, ಕುಣಿದು, ಮಾಡಲಿರುವ ಕನ್ನಡಪಾಠವು ತಮಾಷೆ, ಕಥೆ, ಇತಿಹಾಸ, ಚರಿತ್ರೆಗಳೊಡನೆ ಪದ್ಯಗದ್ಯ ರೂಪವಾಗಿ

ನಡೆಯಲಿರತಕ್ಕುದು. ಕಠಿಣವೂ ಮಕ್ಕಳ ಮನಸ್ಸಿಗೆ ವಿರಸವೂ ಆಗಿರುವ ಶಾಸ್ತ್ರೀಯ ವಿಷಯಗಳು ಇದರೆಡೆ ಬಂದಾಗ ಉಪಾಧ್ಯಾಯರು ಆ ಕಡೆಗೆ ಹೆಚ್ಚಿನ ಗಮನ ಕೊಡದೆ ಯತ್ನವಿಲ್ಲ. ಮಕ್ಕಳ ಆ ಮೆದು ಮನವು ಅಷ್ಟಕ್ಕೆ ಕುಂಠಿತವಾಗಿ ಆಡ್ಡಾಡ ತೊಡಗುತ್ತಿದೆ ಎಂದು ನುರಿತ ತರಬೇತಿ ಹೊಂದಿದ ಉಪಾಧ್ಯಾಯರು ಆಡಿದ ಮಾತನ್ನು ನಾನು ಹಲವು ಬಾರಿ ಕೇಳಿರುವೆನು.

*    *    *    *

ಪ್ರಕೃತ ಈ ಪುಸ್ತಕವು ಮಕ್ಕಳಿಗೆ ಭಾಷಾಭ್ಯಾಸಕ್ಕೆ ಮಾರ್ಗದರ್ಶಕವಾದೀತೆಂಬುದರಲ್ಲಿ ಸಂದೇಹ ಕಾಣದು. ಬಲುಬೇಗನೆ ಮಕ್ಕಳು ಕಲಿತುಕೊಳ್ಳುವುವು. ಅನುಕರಣೆಗಾಗಿ ಹಾಡುವುವು, ಹಾರುವುವು, ಸಲುಗೆಯಿಂದ ಸಂಭಾಷಣೆ ಮಾಡುವುವು. ಹೀಗೆ ಇದೇ ಶೈಲಿಯಲ್ಲಿ ಹೆಚ್ಚುಕಡಿಮೆ ಐದಾರು ಪ್ರಸಂಗಗಳಾಗುವಷ್ಟಕ್ಕೆ ಮಕ್ಕಳು ಆಡುವ, ಹಾಡುವ ಮಾತನಾಡುವ ಚೈತನ್ಯ ಹೊಂದುವುದರಲ್ಲೇನು ತೊಡಕು?

**ಪಂಡಿತ ನಿಡಂಬೂರು ರಾಘವೇಂದ್ರ ಬಲ್ಲಾಳ, ವಿದ್ವಾನ್.**

---

## ಈ ಆಟದಲ್ಲಿ ಬರುವ ಪಾತ್ರವರ್ಗಗಳು.

1. ಗುರುದೇವ, 2. ಕಾಳಿಂಗರಾಜ, 3. ಕೋಲಾಟದ ಮಕ್ಕಳು, 4. ಹುಲಿ, 5. ಪುಣ್ಯಕೋಟಿ ದನ, 6. ಲಕ್ಕಣ್ಣ ಗೌಡ, 7. ಚಿಕ್ಕ ಗೌಡ, 8. ನಾಗಪ್ಪ ಗೌಡ, 9. ಕರು, 10. ಬಾಗಿ, ನಾಗಿ, ತುಂಗು, ಗಂಗು, ದನಗಳು, 11. ತುಂಡುಸೋಮಾರಿ ಹಾಸ್ಯಗಾರ, 12. ಕಾಳಿಂಗ ರಾಜನ ಚಾರಕ, 13. ಬಿಕ್ಕೆ ಗೌಡ, 14. ನಾಗಯ್ಯ ಗೌಡ, 15. ಕೋಟಿ ಮರಕಲ, 16. ಶಂಕರ ಶಾಸ್ತ್ರಿ, 17. ರಂಗು, ರಾಮು, ಶಾಸ್ತ್ರಿಯ ಕಡೆಯ ಹುಡುಗರು 18. ಮಂಗಳ ಪದ್ಯಕ್ಕೆ ಸ್ತ್ರೀವೇಷ.

# ಗೋವಿಜಯ
## (ಗೋವಿನ ಕಥೆ)

* * *

## ದೇವರ ಪ್ರಾರ್ಥನೆ.

॥ ಆದಿತಾಳ ॥

ಮೊದಲಲಿ ವಂದಿಪೆ ಮುದದಲಿ ಗಣಪಗೆ । ಬದುಕುವ ಪರಿಯಂತಾ ॥
ಸದಮಲಚಿತ್ತನೆ ಕರುಣದಿ ಪೊರೆಯೆಲೆ । ಮಧುಪುರ ಗುಣವಂತಾ ॥ ೧ ॥
ಚಿಕ್ಕದು ಬುದ್ಧಿಯು ತಿದ್ದುವ ಕಥೆಯಿದು । ಸಕ್ಕರೆ ರುಚಿಯಯ್ಯ ॥
ಮಕ್ಕಳ ನಗಿಸಲಿ ಅಕ್ಕರೆ ತೋರಲಿ । ಚೊಕ್ಕದಿ ಬರೆಸಯ್ಯ ॥ ೨ ॥
ನೀಡುವೆ ನಿನಗೆ ಕಡುಬನು ಕಡಲೆಯು । ಲಾಡನು ಕಜ್ಜಾಯ ॥
ಮಾಡುವೆ ಪೂಜೆಯು ಉಡುಗರೆ ಉಡಿಸುತ । ಬೇಡುತ ವರವಯ್ಯ ॥ ೩ ॥

॥ ಭಾಮಿನಿ ॥

ಭಕ್ತಿಯಲಿ ಹರಿಹರ ವಿರಂಚಿಗ । ಳುತ್ತಮಾಂಘ್ರಿಯ ನೆನೆನೆನೆದು ॥
ಮುಕ್ತಿದಾಯಕಿಗೆರಗಿ ವಾಣಿಗೆ ಭಕ್ತಿಯಿಂ ಮಣಿದೂ ॥
ಮತ್ತೆ ಮುದದಿಂ ಸುರರ ಕವಿಗಳ ।
ಮೊತ್ತಕಭಿನಮಿಸುತ್ತ ಗುರುಪದ ।
ಭಕ್ತಿಯಲಿ ಧ್ಯಾನಿಸುತ ವಿರಚಿಪೆ ಗೋವಿನಾ ಕಥೆಯಾ ॥ ೧ ॥

---

## ಪ್ರಸಂಗ ಪೀಠಿಕೆ.

॥ ದ್ವಿಪದಿ ॥

ಬಿಡದಲೀಪರಿ ನಮಿಸಿ ಸಕಲ ದೇವರಡಿಗೆ ॥
ದೃಢಮನದಿ ಭಜಿಸಿ ವರ ಕವಿಗಳೆಲ್ಲರಿಗೆ ॥ ೧ ॥

ಸಡಗರದಿ ಪ್ರಾರ್ಥಿಸುತ ಧರಣಿಮಧ್ಯದಲೀ ||
ಕಡುಚಲ್ವುದೆನಿಸಿಪ್ಪ ಕರ್ಣಾಟ ದೇಶದಲಿ || ೨ ||
ಕಾಳಿಂಗನೆಂಬೋರ್ವ ಗೊಲ್ಲನುತ್ತಮನೂ ||
ಕಾಲಕಾಲಕೆ ಬಿಡದೆ ಸೇವೆಗೈದುದನೂ || ೩ ||
ಪುಣ್ಯಕೋಟಿಯು ಗೋವು ತಾನು ವ್ಯಾಘ್ರನಲಿ ||
ತನ್ನ ಭಾಷೆಯ ಸಲಿಸಿ ಬಂದ ಕಥನದಲೀ || ೪ ||
ಅಂಬ್ಲಪಾಡಿಯ ಜಗದ ಅಂಬೆ ಕರುಣದಲೀ ||
ಸಂಭ್ರಮದೆಗೈವರೆನಗಿಂಬು ತೋರುತಲಿ || ೫ ||

---

## ೧. ಗೋವಳರ ಒಡ್ಡೋಲಗ ಸಂಧಿ.

|| ಭಾಮಿನಿ ||

ಹಿಂದೆ ಕೃಷ್ಣನು ಕ್ರಿಸ್ತನುಂ ತಾವ್ |
ಮುಂದೆ ಮೇಸಿದರೆಲ್ಲ ಕರುಗಳ |
ಬಂದುದವರಿಗೆ ಕೀರ್ತಿ ಚಂದದೊಳಂದು ರಾಜ್ಯದಲೀ ||
ಅಂದು ಕೃಷ್ಣನ ದ್ವಾರಕಾಪುರ | ಕುಂದಿನಿತಿಲ್ಲದಂದದಿ ||
ಒಂದೆ ಮೆರೆಯಿತು ಹಿಂದೆ ನಮ್ಮಯ ರಾಜ್ಯವೈಭವವೂ || ೧ ||

**ಗುರುದೇವ:**—ಏನಯ್ಯಾ, ಕರುಗಳು ಮೇಯಿಸುವವರು! ಇಂದು ಫಕ್ಕನೇ ಒಡ್ಡೋಲಗಸ್ಥರಾಗಿ ಬಂದ ಕಾರಣವೇನು?

**ಕಾಳಿಂಗ:**—ರಾಜರಾದ ನಮ್ಮನ್ನು ಕರುಗಳು ಮೇಯಿಸುವವರೆಂದು ಅಂದಿರಷ್ಟೆ. ಹಿಂದೆ ಕೃಷ್ಣ ಪರಮಾತ್ಮನೂ ಅದೇ ಕೆಲಸವನ್ನು ಮಾಡಿರುವನು. ಮತಸ್ಥಾಪಕನಾದ ಕ್ರಿಸ್ತನೂ ಕುರಿಗಳ ಮಂದೆಯನ್ನು ಮೇಯಿಸಿರುವನು. ಅಂದ ಮೇಲೆ ಮಂದೆ ಮೇಯಿಸುವ ಕೆಲಸವು ನಿಂದ್ಯಾಸ್ಪದವಲ್ಲ.

**ಗುರುದೇವ:**—ಒಹೋ, ಕೃಷ್ಣನು ಮಂದೆ ಮೇಯಿಸಿದನೆಂದು ತಾವೂ ಮೇಯಿಸುವುದೇ? ಆ ಲೋಕನಾಯಕನಾದ ಕೃಷ್ಣನಿಗೂ

ನಿಮಗೂ ಗಂಟೇ? ಅವನೇನು, ಅವನ ಪಟ್ಟಣವೇನು? ನೀವೇನು, ನಿಮ್ಮ ವೈಭವವೇನು?

**ಕಾಳಿಂಗ:**—ಅದೀಗ ಸರಿಯಾದ ಪ್ರಶ್ನೆ. ಆ ದ್ವಾರಕಾಪಟ್ಟಣಕ್ಕಿಂತ ನಮ್ಮ ಕರ್ನಾಟಕ ದೇಶವು ಎಲ್ಲಾ ವೈಭವಗಳಲ್ಲಿಯೂ ಮೇಲೆನ್ನಬಹುದು. ಯಾಕಂದರೆ ಕೇಳಿ.

॥ ಭಾಮಿನಿ ॥

ಸುರಿಯುತಿದೆ ಮಳೆಗಾಳಿ ಕಾಲಕೆ |
ಹರಿಯುತಿವೆ ತೊರೆ ಕೆರೆಗಳೆಲ್ಲವು |
ಇರುತಲಿವೆ ಋತುಗಳಲಿ ಫಲಕುಸುಮಾದಿ ಸಂತಸದೀ ||
ಹರಿಯುವಾ ಕಾವೇರಿ ತಟದಲಿ |
ಇರುವ ಕರ್ನಾಟಕದ ಭೂಮಿಯು |
ಮೆರೆಯುತಿದೆ ಧನಧಾನ್ಯ ಕನಕದ ವರಗನಿಗಳಿಂದಾ ॥ ೨ ॥

**ಕಾಳಿಂಗ:**—ಅಯ್ಯಾ! ನಮ್ಮ ದೇಶದಲ್ಲಿ ಕಾಲಕಾಲಕ್ಕೆ ಸರಿಯಾಗಿ ಗಾಳಿಯು ಬೀಸುತ್ತಿದ್ದು, ಕಾಲವೃಷ್ಟಿಯು ಸುರಿಯುತ್ತಿವೆ. ಕೆರೆ ತೊರೆಗಳೆಲ್ಲಾ ತುಂಬಿ ತುಳುಕಿ, ನದಿಗಳು ಪ್ರವಾಹದಿಂದೊಡಗೂಡಿ ಹರಿಯುತ್ತಿವೆ. ಎಲ್ಲಿ ನೋಡಿದರೂ ದವಸಧಾನ್ಯಗಳ ಹೊಲ; ಹಲಸು, ಹೆಬ್ಬಲಸು ಮುಂತಾದ ಮರಗಳ ತೋಟ; ತೇಗು, ಗಂಧ, ಬೀಟೆ, ಮತ್ತಿ ಮುಂತಾದ ಮರಗಳ ಕಾಡು; ಅಲ್ಲದೆ ಎಲ್ಲಾ ಋತುಗಳಲ್ಲಿಯೂ ಪುಷ್ಪ ಫಲಗಳನ್ನು ಕೊಟ್ಟು ಜನರನ್ನು ಆನಂದಗೊಳಿಸುವ ಮರಬಳ್ಳಿಗಳು ಅಲ್ಲದೆ ಕಾವೇರಿ ನದಿಯು ಮೇಲ್ಗಡೆ ವಿಶಾಲವಾದ ಬೈಲು, ಬೆಟ್ಟ, ಹುಲ್ಲುಗಾವಲು; ಅದರ ಮೇಲೆ ಗಿರಿ ಬೆಟ್ಟಗಳು; ಅಲ್ಲಲ್ಲಿ ಚಿನ್ನದ ಗನಿಗಳು; ಮತ್ತು ಬೇಕಾದಷ್ಟು ಹಾಲನ್ನು ಕೊಟ್ಟು ಜನರನ್ನು ಸಂತೋಷಗೊಳಿಸುವ ಗೋವುಗಳು, ಇವುಗಳಿಂದ ಯಾವ ಸಂಪತ್ತಿಗೂ ಕಡಿಮೆಯಿಲ್ಲದೆ ಇದೆ. (ಇಲ್ಲಿ ಮಳೆ, ಹೊಳೆ, ಕೆರೆ, ಹಳ್ಳ, ನೀರಾವರಿ, ಕಾಡು, ಬೈಲು, ಮಜಲು, ಬೆಟ್ಟ, ಗುಡ್ಡ ಇತ್ಯಾದಿ ಭೂಗೋಳ ಪಾಠ ವಿವರಿಸಬಹುದು.)

**ಗುರುದೇವ:**—ಸರಿ, ಇಂದ್ರನ ಅಮರಾವತಿಗೆ ಸರಿತೂಗಬಹುದು, ಆದರೆ, ನೀವು ದಿನವಹಿ ಮಾಡುವ ಕೆಲಸಗಳೇನು?

ಧಾಟಿ:—(ಇಂತಿ ಪರಿಯಲೀ ಪಾರ್ಥನ ಪೊಗಳಲು । ನಂತರದಲಿ ರವಿಜಾ)

॥ ಮಾರವಿ—ಏಕತಾಳ ॥

ಕರೆಯುತ ಹಾಲನ್ನೊರಸುತ ಮೈಯನು | ಇರಿಸುತ ನೀರನ್ನು ||
ಮೆರೆಯುತಲಿರುವೆನು ಸೂರ್ಯನು ಮುಳುಗುವ |
ಪರಿಯಂತವು ನಾನೂ || ೩ ||

**ಕಾಳಿಂಗ:**—ಅಯ್ಯಾ, ನಾವು ಸೂರ್ಯೋದಯಕ್ಕೆ ಮೊದಲಾಗಿ ಎದ್ದು, ಸ್ನಾನವನ್ನು ತೀರಿಸಿ, ಮೊಸರನ್ನವನ್ನೂ, ಬೆಣ್ಣೆ ದೋಸೆಯನ್ನೂ ಮೆದ್ದು, ನಮ್ಮ ಹಿಂಡಿನ ದನಗಳನ್ನೆಲ್ಲಾ ಹೊಡೆದುಕೊಂಡು, ಹುಲ್ಲು ಗಾವಲಿಗೆ ಹೋಗುವೆವು. ಅಲ್ಲಿ ಹಾಲನ್ನು ಕರೆಯುವೆವು, ದನಗಳ ಮೈಯನ್ನು ಉಜ್ಜುವೆವು, ಎಳೆ ಹುಲ್ಲುಗಳನ್ನು ಕೊಡುವೆವು, ನಿರ್ಮಲ ವಾದ ನೀರನ್ನು ಕುಡಿಸುವೆವು, ಹೀಗೆ ಸಂಜೆಯ ವರೆಗೂ ಗೋಸೇವೆ ಯನ್ನೇ ಮಾಡುವೆವು (ಬೆಳಗ್ಗೆ ಮಾಡತಕ್ಕ ಕೆಲಸ ವಿವರಿಸಬಹುದು).

**ಗುರುದೇವ:**—ಆ ಮೇಲೆ ಏನು ಮಾಡುವಿರಿ?

**ಕಾಳಿಂಗ:**—ಹೇಳುತ್ತೇನೆ.

॥ ಮಾರವಿ—ಏಕತಾಳ ॥

ಅಟ್ಟುತ ದನಗಳ ಹೈಹೈ ಎನುತಲಿ | ಕಟ್ಟುತ ಹಟ್ಟಿಯಲೀ ||
ಮುಟ್ಟುವೆ ಮನೆಯನು ಮಲಗುವೆ ಸುಖದಲಿ | ತಟ್ಟನೆ
ಸಿತ್ಯದಲೀ || ೪ ||

**ಕಾಳಿಂಗ:**—ಅಯ್ಯಾ, ಆ ಮೇಲೆ ಎಲ್ಲಾ ದನಗಳನ್ನು ಅಟ್ಟಿ ಕೊಂಡು ಬಂದು, ಅವವುಗಳ ಕೊಟ್ಟಿಗೆಯ ಸ್ಥಾನಗಳಲ್ಲಿ ಕಟ್ಟಿಬಿಟ್ಟು, ನಮ್ಮ ಎಲ್ಲಾ ಗೋವಳರ ಕ್ಷೇಮ ವಾರ್ತೆಗಳನ್ನು ವಿಚಾರಿಸಿ, ರಾಜ್ಯದ ವಿಚಾರವನ್ನು ಚಾರಕರಿಂದ ತಿಳಿದು, ಪರಿಪಾಲನಾಕ್ರಮವನ್ನು ನೌಕರು

ಗಳಿಗೆ ತಿಳಿಸುತ್ತೇನೆ. ನರ್ತನ, ಕೋಲಾಟ ಮೊದಲಾದ ಸಂಭ್ರಮ ಗಳನ್ನು ನೋಡಿ ಆನಂದಪಟ್ಟು, ಇಂದಿನಂತೆಯೇ ಒಡ್ಡೋಲಗವನ್ನು ಪೂರೈಸುವುದೇ ನಮ್ಮ ನಿತ್ಯದ ಪದ್ಧತಿ. ಬಲ್ಲಿರಾ! ಎಲ್ಲಿ? ಲಕ್ಕಣ್ಣ ಗೌಡ, ಚಿಕ್ಕ ಗೌಡ, ನಾಗಪ್ಪ ಗೌಡ, ಎಲ್ಲರೂ ಕೇಳ ಬೇಕು. ಇಂದು ದೀಪಾವಳಿ; ಅಮಾವಾಸ್ಯೆ ರಾತ್ರಿ; ಕತ್ತಲಾಯಿತು. ಹಬ್ಬದ ದಿನವಾದ್ದರಿಂದ ಇಂದಿನ ಸಭೆಯನ್ನು ಬೇಗನೆ ಅಂತ್ಯಪಡಿ ಸಿದ್ದೇನೆ. ನಿಮ್ಮ ನಿಮ್ಮ ದನಗಳನ್ನು ಆಯಾ ಸ್ಥಾನದಲ್ಲಿ ಕಟ್ಟಿ ಅವು ಗಳಿಗೆ ತಕ್ಕ ಆಹಾರವನ್ನು ಇಕ್ಕಿರಿ. ನಾಳೆ ಬೆಳಗ್ಗಿನ ಒಡ್ಡೋಲಗಕ್ಕೆ ಸರಿಯಾಗಿ ಎಲ್ಲರೂ ಬನ್ನಿರಿ, ಈಗ ತೆರಳಿರಿ. (ಎಲ್ಲರೂ, 'ಬುದ್ಧಿ, ಅಪ್ಪಣೆ' ಎಂದು ಹೇಳಿ ವಂದಿಸಿ ಹೋಗುವರು.)

(ಈ ಸಂದರ್ಭದಲ್ಲಿ ಎಷ್ಟು ಹಾಸ್ಯವನ್ನೂ, ಆಟಗಳನ್ನೂ ಮಾಡಿಸಬಹುದು.)

---

## ೨. ಅಭಯಸಂಧಿ

(ಅತ್ತ ಕಾಡಿನಲ್ಲಿ ಬರುತ್ತಿದ್ದ ದನದ ಪ್ರವೇಶ)

॥ ಭಾಮಿನಿ ॥

ಹಿಂಡನಗಲಿದ ಪುಣ್ಯಕೋಟಿಯು |
ಗೊಂಡು ಭೀತಿಯ ಬಲದಿ ಕಾಡೊಳು |
ಮಂಡೆಯನು ಮೇಲೆತ್ತಿ ಅಂಬಾ ಎಂದು ಕೂಗುತಲೀ ||
ಹಿಂಡು ಗೋವ್ಗಳನೆಲ್ಲ ಕರೆಯುತ | ಕಂಡ ದೇವರಿಗೆಲ್ಲ ವಂದಿಸಿ |
ಕೊಂಡು ಸಿಶಿಯಲಿ ಒಂದೆ ನಡುಗುತ ಬಂತು ಕಳವಳಿಸೀ || ೫ ||

**ಪುಣ್ಯಕೋಟಿ ದನ:—** ನಾನು ಎಷ್ಟು ಸಲ ಅಂಬಾ ಎಂದು ಕೂಗಿದರೂ ನನಗೆ ಪ್ರತಿಧ್ವನಿ ಸಿಕ್ಕುವುದಿಲ್ಲವಲ್ಲಾ! ನನ್ನ ಹಿಂಡಿನ ದನಗಳೆಲ್ಲಾ ಆಗಲೇ ಊರನ್ನು ಮುಟ್ಟಿರಬೇಕು. ನಾನು ಈ ಭಯಂಕರ ಕಾಡಿನಲ್ಲಿ ಸಿಕ್ಕಿಬಿದ್ದೆ. ಕತ್ತಲೆಯು ಮುಂದೊತ್ತುತ್ತಿದೆ. ಹುಲಿಯ ವಾಸನೆಯು ಮೂಗಿಗೆ ಬಡಿಯುತ್ತದೆ. ಕೈಕಾಲುಗಳು ನಡುಗುತ್ತವೆ.

ಅಯ್ಯೋ ದೇವರೇ! ನೀನೇ ಈ ಸಮಯದಲ್ಲಿ ನನ್ನನ್ನು ಕಾಯಬೇಕು. ನನ್ನ ಕರುವಿನ ಮುಖವನ್ನು ನೋಡುವಂತೆ ಅನುಗ್ರಹಿಸಬೇಕು. ಆದಷ್ಟು ಬೇಗಬೇಗನೆ ಈ ದಾರಿಯಲ್ಲಿ ಹೋಗುವೆನು.

(ಗರ್ಜಿಸುವ ಹುಲಿಯ ಪ್ರವೇಶ)

**ಗುರುದೇವ:**—ಯಾರದು? ನಮ್ಮ ಈ ರಂಗಸ್ಥಳದಲ್ಲಿ ನೆಲವೇ ಅಲುಗುವಂತೆ ಘರ್ಜಿಸುವುದು?

**ಹುಲಿ:**—ನಾನೋ! ನಾನು, ಈ ಅಡವಿಯ ಒಡೆಯ. ಸಿಂಹ ರಾಜನ ಮೋಹದ ತಮ್ಮ. ಓಹೋ! ನೋಡಿ. ನನ್ನನ್ನು ಸರಿಯಾಗಿ ನೋಡಿ. ನನ್ನ ಕೆಂಡದಂತಹ ಕಿಡಿ ಕಾರುವ ಕಣ್ಣು, ಕೋರೆ ಹಲ್ಲಿನ ಜೋಲು ನಾಲಿಗೆಯ ಬಾಯಿ, ಮೈತುಂಬಾ ಚಿನ್ನದ ಪಟ್ಟಿ, ಅದರ ಮೇಲೆಲ್ಲಾ ಬೊಟ್ಟು. ನನ್ನಂಥ ಭಯಂಕರ ರಾಜರು ಈ ನಾಡಿನಲ್ಲಿ ಬೇರೆ ಯಾರಿದ್ದಾರೆ? ಆದ್ದರಿಂದ ನಾನೇ ಈ ಪೃಥ್ವಿಗೆ ನಾಥ; ತಿಳಿಯಿತೇ?

**ಗುರುದೇವ:**—ನಿಮ್ಮ ಮಾತುಗಳಿಂದ ತಿಳಿಯಿತು. ತಾವು ಬಂದ ಕಾರ್ಯವೇನು?

**ಹುಲಿ:**—ಹೇಳುತ್ತೇನೆ.

‖ ಭಾಮಿನಿ ‖

ಹಸಿದು ಬಳಲುತಲಿರುವ ಸಮಯದಿ |
ಬಸವಳಿದು ಬರುತಿರುವ ಗೋವನು |
ಅಸಮ ಸಾಹಸಿ ಕಂಡು ಮನದಲಿ ತೋಷವನು ತಳೆದೂ ||
ಕುಸುಮನಾಭನೆಯನಗೆ ಅಶನವ |
ಬಸವಳಿಯದಂದದಲಿ ತೋರಿದ |
ನಿಶಿಯೊಳಗೆ ಆ ಪಾಯಸಾನ್ನವನುಂಬೆ ನಾನೆಂದೂ || ೬ ||

**ಹುಲಿ:**—ಹೌದಯ್ಯ, ನನ್ನ ಹೊಟ್ಟೆ ನೋಡಿದಿರಾ, ಎಷ್ಟು ಚಪ್ಪಟೆಯಾಗಿದೆ! ಈ ನಾಲ್ಕು ದಿನಗಳಿಂದಲೂ ಏಕಾದಶಿ ಉಪವಾಸದ ಮಹಿಮೆಯನ್ನು ಏನೆಂದು ಹೇಳಲಿ? ಅದರ ಫಲವಾಗಿ ಶ್ರೀ ದೇವರು ಒಂದು ಹೊಸ ಊಟವನ್ನು ಒದಗಿಸಿಕೊಟ್ಟನು. ಹೋ! ಗುರುದೇವರೇ,

ಮೂಗನ್ನು ಅರಳಿಸಿರಿ, ಏನು ಪರಿಮಳ ಬರುತ್ತದೆ, ಕಾಡು ಪ್ರಾಣಿಗಳಿಗೆ, ಬಲ್ಲಿರಾ? ನಾಡಿನ ಗೋವಿನ ಮಾತೆಯ ಪರಿಮಳ! ರುಚಿ ತಿಂಡಿ ತಿನ್ನುವ ಭಾಗ್ಯ ಬಂತು. ಇಂಥ ಮೃಷ್ಟಾನ್ನದ ಊಟ ಉಣ್ಣುವ ಯೋಗ್ಯತೆ ನನಗಲ್ಲದೆ ಇನ್ಯಾವ ಪುಣ್ಯಾತ್ಮರಿಗಿದೆ? ಆದ್ದರಿಂದ ಈ ಗೋವನ್ನು ಹಿಡಿದು ಬಿಡುತ್ತೇನೆ. ನೋಡಿ.

॥ ಭಾಮಿನಿ ॥

ಬಿಸಿ ಬಿಸಿಯ ರಕುತವನು ಕುಡಿಯುತ |
ಬಸೆಬಸೆಯ ಎಲುಬುಗಳ ತರಿವುತ |
ಪೆಸರಪಡೆವೆನು ಗೋವುಭಕ್ಷಕನೆಂಬ ಬಿರುದುಗಳಾ ||
ವಸುಧೆಯೊಳು ನಾ ಪಡೆಯದಿದ್ದರೆ ।
ಅಸಮ ಭುಜಬಲವಿದ್ದರೇನೆಂ |
ದಸಮಸಾಹಸಿ ಮನದಿ ಯೋಚಿಸಿ ಅಡ್ಡ ಕಟ್ಟಿದನೂ || ೭ ||

**ಹುಲಿ:**— ಗುರುದೇವರೇ, ನನ್ನ ಕೈಯಲ್ಲಿ ಸಿಕ್ಕಿತು ಈ ತುತ್ತು. ಇನ್ನು ಬಾಯಿಗೆ ಬೀಳುವುದೇ ತಡ. ಈಗಲೇ ಅಡ್ಡ ಕಟ್ಟಿ ಕೊರಳನ್ನು ಅವುಕಿ ಹಿಡಿದು, ಇದರ ಒಡಲನ್ನು ಉಗುರುಗಳಿಂದ ಬಗೆದು, ಎದೆಗುಂಡಿಗೆಯನ್ನು ಹಿಂಡಿ, ಬಿಸಿ ಬಿಸಿ ರಕ್ತವನ್ನು ಕುಡಿಯುವೆನು. ಈ ದೊರಗಾದ ನಾಲಗೆಯಿಂದ ಮೂಳೆಗೆ ಅಂಟಿರುವ ಮಾಂಸವನ್ನು ಸಹ ನೆಕ್ಕಿ ನೆಕ್ಕಿ ತಿನ್ನುವೆನು. ಗೋಭಕ್ಷಕನೆಂಬ ಬಿರುದಿನ ಹೆಸರನ್ನು ಧರಿಸಿರುವ ನಾನು ಯಾರ ಲಕ್ಷ್ಯವೂ ಇಲ್ಲದೆ ಇದನ್ನು ಈಗಲೇ ಭಕ್ಷಿಸಿ ಬಿಡುತ್ತೇನೆ. ಗುರುದೇವರೇ, ನೀವೆಲ್ಲಿಯಾದರೂ ಕುದಿಗಿದಿ ಮಾಡಿದರೆ ಜಾಗ್ರತೆ! ನನ್ನ ಹಲ್ಲು ನೋಡಿಕೊಳ್ಳಿ. ಈಗ ದನವನ್ನು ಹಿಡಿದು ಬಿಡುತ್ತೇನೆ. ಅಮ್ಮ, ಅಂಬೆ! ಅಂಬೆ! ಏನು ಕೂಗುತ್ತದಯ್ಯ! ಅಬ್ಬಬ್ಬಾ ಇದರ ಕಂಠವೇ!

॥ ಮಾರವಿ ಏಕತಾಳ ॥

ಎಲ್ಲಿಗೆ ತಪ್ಪಿಸಿಕೊಳ್ಳುತ ಓಡುವೆ । ನಿಲ್ಲೆಲೆ ಅಲ್ಲಿನ್ನು ||
ಬಲ್ಲೆನು ನಿನ್ನನು ಕೊಳ್ಳೆಯ ಹೊಡೆಯಲು | ಹಲ್ಲಲಿ ಹಿಡಿಯುವೆನೂ || ೮ ||

**ಹುಲಿ:**—ಏ ಪಳ್ಳ! ಎಲ್ಲಿಗೆ ತಪ್ಪಿಸಿಕೊಂಡು ಹೋಗುತ್ತೀ? ನಿಲ್ಲು ನಿಲ್ಲು, ನಿನ್ನ ಶಕ್ತಿಯುಕ್ತಿಗಳನ್ನು ನಾನು ಬಲ್ಲೆನು. ನನ್ನ ಕೋರೆ ಹಲ್ಲುಗಳಿಂದ ಈಗಲೇ ಹಿಡಿದು ಕೊಳ್ಳೆ ಹೊಡೆಯುವೆನು. ನಿಲ್ಲು, ಅಲ್ಲಿಯೇ ನಿಲ್ಲು.

ಧಾಟಿ:— (ಅರಿವಳಿಗೆನಗಪ್ಪಣೆಯಾಗಬೇಕೆಂದು । ಕರವ ಮುಗಿದ ಪಾರ್ಥನೂ)

॥ ಕೇತಾರಗೌಳ—ಅಷ್ಟತಾಳ ॥

ಹುಲಿರಾಯ ನೀಕೇಳು ಹಲವು ಮಾತುಗಳುಂಟು ।
ಕೊಲ್ಲದಿರಯ್ಯಾ ನೀನೂ ॥
ಬಳಲಿ ಬಾಯಾರುತ ಹಿಂಡಿಲಿ ಹಿಂದಕ್ಕೆ ।
ತೊಳಲಿರುವೆನು ನಾನೂ ॥ ೯ ॥

**ಪುಣ್ಯಕೋಟಿ:**—ಅಯ್ಯಾ! ರಾಜಾಧಿರಾಜ! ಹುಲಿರಾಯ! ನನ್ನ ಮಾತುಗಳನ್ನು ಲಾಲಿಸಿ ಕೇಳಬೇಕು. ನಾನು ಕಾಳಿಂಗನೆಂಬ ಗೊಲ್ಲನ ಮಂದೆಯಲ್ಲಿ ಮೇಲಾದವಳು. ನನಗೆ ಪುಣ್ಯಕೋಟಿಯೆಂಬ ನಾಮ ಧೇಯವಿರುವುದು. ಈ ದಿನ ನಾನು ಬಹಳ ಬಳಲಿದ್ದ ಕಾರಣ ಹಿಂಡಿನಲ್ಲಿ ಹಿಂದೆ ಬಿದ್ದೆನು. ಕತ್ತಲಾದುದರಿಂದ ಹೆದರಿ ನಡುಗಿ, ಬಾಯಾರಿ, ಬೆಂಡಾಗಿದ್ದೇನೆ. ಇಂಥಾ ನನ್ನನ್ನು ಥಕ್ಕನೆ ಕೊಲ್ಲುವುದು ಧರ್ಮವಲ್ಲ.

॥ ಮಾರವಿ ಏಕತಾಳ ॥

ಅಡ್ಡವ ಕಟ್ಟುವೆ ದಡ್ಡಿಯೆ ನಿಲ್ಲೆಲೆ । ಗುಡ್ಡದ ಹುಲಿ ನಾನು ॥
ಹೆಡ್ಡಳೆಯೋಚನೆ ಬಿಡುಬಿಡು ಬೇಗನೆ । ಬಡ್ಡನೆ ಬಡೆಯು ವೆನೂ ॥ ೧೦ ॥

**ಹುಲಿ:**—ಎಲೆ ದಡ್ಡೆ, ನಿನ್ನ ದೊಡ್ಡ ದೊಡ್ಡ ಮಾತುಗಳಿಗೆ ನಾನೇನು ಹೆದರತಕ್ಕವನಲ್ಲ. ಗುಡ್ಡದ ದೊಡ್ಡ ರಾಜನಾದ ನನಗೆ ನಿನ್ನನ್ನು ಒಡ್ಡನೆ ಒಡೆದು ತಿನ್ನುವ ಭಾಗ್ಯವಿದೆ. ಆದ್ದರಿಂದ ನಿನ್ನ ಅಡ್ಡಾಲೋಚನೆಯನ್ನು ಬಿಟ್ಟು ಬೇಗನೆ ಅಡ್ಡ ಬೀಳು.

॥ ಕೇತಾರಗೌಳ—ಅಷ್ಟತಾಳ ॥

ಬಂದಿಹೆ ಮುಂಜಾನೆ ಕಂದನ್ನ ಬಿಟ್ಟಲ್ಲಿ | ಒಂದೆ ಮಾತನ್ನು ಕೇಳು ||
ನೊಂದಿಹ ಕರುವಿಗೆ ಮೊಲೆಯನುಣ್ಣಿಸಿ ಬೇಗ | ಬಂದು ಸೇವಿಪೆ
ನುತಾಳೂ ॥ ೧೧ ॥

**ಪುಣ್ಯಕೋಟಿ:** — ಹೇ ನನ್ನೊಡೆಯಾ, ಇನ್ನೊಂದು ಸಣ್ಣ ಮಾತನ್ನು ಕೇಳಬೇಕು. ನನ್ನ ಸಣ್ಣ ಮಗುವಿಗೆ ಬೇಗ್ಗೆ ಮೊಲೆಯುಣ್ಣಿಸಿ ಬಂದಿರುವೆನು. ಈ ವರೆಗೆ ನನ್ನನ್ನು ಕಾಣದೆ ಎಷ್ಟು ವಿಧದಿಂದ ಅಳುತ್ತದೋ ಏನೋ! ಇದುವರೆಗೆ ನನ್ನನ್ನು ಅದು ಬಿಟ್ಟು ಇರಲಿಲ್ಲ. ನನಗೆ ಇರುವುದೇ ಒಂದು ಮಗು. ಅದಕ್ಕೆ ಮೊಲೆಯುಣ್ಣಿಸಿ ಎರಡು ಬುದ್ಧಿಯ ಮಾತುಗಳನ್ನು ಹೇಳಿಬರುವೆನು. ನೀವು ಅಪ್ಪಣೆ ಕೊಡಿಸಿದ್ದಾದರೆ ಬಂಧುಗಳ ಮುಖವನ್ನು ಒಮ್ಮೆ ನೋಡಿ ಬರಬೇಕೆಂಬ ಆಸೆ ಇದೆ.

॥ ಸಾರವಿ—ಏಕತಾಳ ॥

ಎಲೆ ಎಲೆ ಮೂರ್ಖಳೆ ಸುಡುಸುಡು ನಿನ್ನಯ |
ಕಿಲಕಿರಿ ಮಾತುಗಳಾ |
ಸಲಿಗೆಯು ಏನಿದು ಮೊಲೆಯನು ಉಣ್ಣಿಸಿ |
ಸಲಿಸಿಲಿ ಬರುವವಳೇ ॥ ೧೨ ॥

**ಹುಲಿ:**—ಎಲೈ! ಮೂರ್ಖ ದನವೇ ಅಲ್ಲಸಲ್ಲದ ಮಾತುಗಳಿಂದ ನನ್ನನ್ನು ಮೋಸಗೊಳಿಸುವೆಯಾ? ನಿನಗೆ ಅಷ್ಟರ ಮಟ್ಟಿನ ಸಲಿಗೆ ಬಂತೇ? ಹೌದಯ್ಯ! ಗುರುದೇವರೇ, ಮಗುವಿಗೆ ಮೊಲೆಯನ್ನು ಕೊಟ್ಟು ಸುಲಭವಾಗಿ ನನ್ನ ಬಾಯಿಗೆ ತುತ್ತಾಗಲು ಬರುವಳಂತೆ! ಏನು ಹುಚ್ಚು ಮಾತು! ಮುಚ್ಚುಬಾಯ್! ಕೈಗೆ ಸಿಕ್ಕಿದ ನಿನ್ನನ್ನು ಖಂಡಿತ ಬಿಡುವ ಹಾಗಿಲ್ಲ.

॥ ಕೇತಾರಗೌಳ—ಅಷ್ಟತಾಳ ॥

ರಾಜರು ಪಾಪಿಯ ಶಿಕ್ಷಿಯ ವಿಧಿಸಲು | ಸಾಜದಿ ಕೇಳುವರೂ ||
ಮಾಜಾದೆ ಬೇಕಾದ ಬಯಕೆಯ ಸಲಿಸುತ್ತ | ಲೀ ಜಗದಲಿ
ಜನರೂ ॥ ೧೩ ॥

**ಪುಣ್ಯಕೋಟಿ:**— ಹುಲಿರಾಯ, ಲೋಕದಲ್ಲಿ ರಾಜರು ಪಾಶಿಯ ಶಿಕ್ಷೆಯನ್ನು ಹೊಂದಿದ ಅಪರಾಧಿಗಾದರೂ ಪಾಶಿಗೆ ಕೊಡುವ ದಿನ ಅವನು ಬಯಸಿದ ಬಯಕೆಯನ್ನು ಸಲ್ಲಿಸಿ, ಆ ಮೇಲೆ ಗಲ್ಲಿಗೇರಿಸುವರು. ಅಂದ ಮೇಲೆ ಮೃಗರಾಜರಾದ ನೀವು ಬಡವಳಾದ ನನ್ನ ಸಹಜವಾದ ಬಯಕೆಯನ್ನು ಸಲ್ಲಿಸಿಕೊಡುವುದು ಧರ್ಮವಲ್ಲವೇ? ಆದ್ದರಿಂದ ಬಿಡಿರಿ, ನನ್ನ ಮಗುವಿಗೆ ಮೊಲೆಯುಣ್ಣಿಸಿ ಬರುತ್ತೇನೆ.

‖ ಮಾರವಿ— ಏಕತಾಳ ‖

ಹೊಟ್ಟೆಯು ಹಸಿದಿಹ ಘಟಿಯಲಿ ಸಿಕ್ಕಿದೆ | ತಟ್ಟನೊದಗಿ ನೀನು ‖
ಬಿಟ್ಟರೆ ಬರುವೆಯ ಛಟ್ಟನೆ ಓಡುವೆ | ಮೆಟ್ಟುತ ಹಿಡಿಯುವೆನು ‖೧೪‖

**ಹುಲಿ:**— ಎಲಾ, ಮಂಕು ದನವೇ, ನಿನ್ನ ಜಾಣತನದ ಮಾತುಗಳು ಇನ್ನು ಉಳಿದಿರುವ ಹಾಗೆ ಕಾಣುವುದಿಲ್ಲ. ಹೊಟ್ಟೆ ಹಸಿದಿರತಕ್ಕ ಗಳಿಗೆಯಲ್ಲಿ ಸಿಕ್ಕಿದ ನಿನ್ನನ್ನು ಈಗ ಬಿಟ್ಟದ್ದೇ ಆದರೆ ನೀನು ತಟ್ಟನೆ ಓಡುವೆ. ಆ ಮೇಲೆ ನಾನು ಬಾಯಿಗೆ ಬಾಲವನ್ನಿಟ್ಟು ಕುಳಿತುಕೊಳ್ಳಬೇಕಾಗುವುದು. ಒಂದು ವೇಳೆ ನಿನ್ನನ್ನು ಬಿಡಬೇಕಾದರೆ ತಕ್ಕ ಜಾಮೀನು ಕೊಡಬೇಕು.

‖ ಕೇತಾರಗೌಳ— ಅಷ್ಟತಾಳ ‖

ತಂದೆತಾಯಿಗಳೆಲ್ಲ ಬಂಧು ಬಾಂಧವರೆಲ್ಲ |
ಒಂದಿಹ ಕಂದನನೂ ‖
ಇಂದು ದೇವರ ಮುಂದೆ ತಂದು ಭಾಷೆಯನೀವೆ | ಒಂದೆ ಮಾತಿದು
ಸತ್ಯವೂ ‖ ೧೫ ‖

**ಪುಣ್ಯ:**— ದಮ್ಮಯ್ಯ, ಹುಲಿರಾಯ! ದೇವರ ಮುಂದೆ ಸತ್ಯವಾಗಿ ಒಂದು ಮಾತನ್ನು ಹೇಳುತ್ತೇನೆ. ನನ್ನ ತಂದೆತಾಯಿಗಳು, ಹಾಗೂ ಬಂಧು ಬಾಂಧವರು, ಹೆಚ್ಚೇಕೆ ನನ್ನ ಒಂದೇ ಒಂದಾದ ಕಂದನ ಆಣೆಯನ್ನು ಇಟ್ಟು ಬೇಡುತ್ತೇನೆ. ನನ್ನನ್ನು ಒಮ್ಮೆಗೆ ಹಟ್ಟಿಯ ವರೆಗೆ ಕಳುಹಿಸಿಕೊಡಬೇಕು. ತಡಮಾಡದೆ ಬಂದು ನಿಮ್ಮ ಹಸಿವೆಯನ್ನು ತೀರಿಸುತ್ತೇನೆ. ಇದರಲ್ಲಿ ಏನೂ ಸಂದೇಹವಿಲ್ಲ.

**ಹುಲಿ:**—ಹೌದಯ್ಯ! ನಿಮ್ಮ ಆಲೋಚನೆ ಹೇಗೆ? ಇದರ ಮಾತನ್ನು ನಂಬಬಹುದೋ?

**ಗುರುದೇವ:** ಏನೋ ನಿಮ್ಮ ಧೈರ್ಯ!

**ಹುಲಿ:**—ಇದರ ಮಾತನ್ನು ಕೇಳುವಾಗ ಧೈರ್ಯವಿಲ್ಲದವರಿಗೆ ಧೈರ್ಯಹುಟ್ಟಬೇಕು. ನನ್ನ ಬಲಕಣ್ಣು ಕುಣಿಯುತ್ತದೆ. ಶುಭಶಕುನ ಕಾಣುತ್ತದೆ. ನಿಮ್ಮ ಜಾಮೀನಿನ ಮೇಲೆ ಬಿಟ್ಟುಬಿಡುತ್ತೇನೆ. ಎಲಾ ದನವೇ, ಬೇಗನೆ ನಿನ್ನ ಬಯಕೆ ತೀರಿಸಿ ಬೆಳಗಾಗುವ ಮುಂಚೆ ಬಾ. ಜಾಗ್ರತೆ! ನಡೆ.

**ಗುರುದೇವ:**—ಹೌದಯ್ಯ ಹುಲಿರಾಯ, ದನವನ್ನು ಥಕ್ಕನೆ ಬಿಟ್ಟು ಬಿಟ್ಟರಷ್ಟೆ.

**ಹುಲಿ:**—ಓಹೋ! ನಮ್ಮ ಸ್ವಭಾವ ನಿಮಗೆ ತಿಳಿಯಲಿಲ್ಲ. ನಾವು ಬಾಯಲ್ಲಿ ಬಡಬಡ ಮಾತನಾಡಿದರೂ ಮನಸ್ಸಿನಲ್ಲಿ ಪಕ್ವವಾಗಿದ್ದೇವೆ. ಯಾಕಂದರೆ ನನಗೆ ಇನ್ನೆಷ್ಟು ಕಾಲ ಬದುಕಬೇಕಾಗಿದೆ ಸ್ವಾಮಿ! ಕಡೆ ಹಲ್ಲು ಉದುರಿದೆ. ಈ ಕಾಲದಲ್ಲಿ ನ್ಯಾಯವನ್ನು ಪಾಲಿಸದಿದ್ದರೆ ಇನ್ನು ಯಾವಾಗ ಪುಣ್ಯವನ್ನು ಗಳಿಸುವುದು? ಈ ದನದ ಹೆಸರು ಕೇಳುವಾಗಲೇ ನನಗೆ ಅದರ ಮೇಲೆ ಕರುಣೆ ಹುಟ್ಟಿದೆ. ಅದರ ಮಾತುಗಳಿಂದ ನನ್ನ ಮನಸ್ಸು ಕರಗುವುದರಲ್ಲಿ ಏನಾಶ್ಚರ್ಯ? ಅದು ನಿಜವಾಗಿ ಪ್ರಾಣದ ಆಸೆ ಬಿಟ್ಟಿದೆ. ಅದು ಮಗುವಿಗೆ ಮೊಲೆಯನ್ನು ಕೊಟ್ಟು ಬರುವುದಕ್ಕಾಗಿ ಮಾತ್ರ ಸಮಯವನ್ನು ಕೇಳಿದೆ. ಅದು ನ್ಯಾಯವಲ್ಲವೇ? ಅಷ್ಟು ರಿಯಾಯತಿ ತೋರಿಸದಿದ್ದರೆ ನಮ್ಮಲ್ಲಿ ಮೃಗರಾಜರೆಂಬ ಗೌರವ ಉಳಿದೀತೇ?

**ಗುರುದೇವ:**--ಓಹೋ! ಗೌರವವನ್ನು ಉಳಿಸಿಕೊಳ್ಳುವುದಕ್ಕಾಗಿ ಅದನ್ನು ಬಿಟ್ಟದ್ದು! ಹಾಗಾದರೆ ಕೊಂದು ತಿನ್ನುವುದು ನಿಶ್ಚಯ. ಒಂದು ವೇಳೆ ಅದು ಬಾರದೆ ಹೋದರೆ ಏನು ಮಾಡುತ್ತೀರಿ ಸ್ವಾಮಿ?

॥ ಭಾಮಿನಿ ॥

ಕೆಟ್ಟ ದನವದು ಭಾಷೆ ತಪ್ಪುತ | ತಟ್ಟನೇ ತಾ ಬಾರದಿದ್ದರೆ |
ಬಿಟ್ಟುಬಿಡುವೆನೆ ನಾನು ನೋಡಿರೆನುತ್ತ ಘರ್ಜಿಸಿತೂ ||
ಪಟ್ಟಪಟ್ಟಣಗಳಲಿ ಬಿಡೆನಾ | ಹಟ್ಟಿಹಟ್ಟಿಯು ಸಂದುಹುಡುಕುತ |
ನೆಟ್ಟಗೆಳತರಲೋಡುವೆನು ನಾ ಕೆಟ್ಟ ಗೋವುಗಳಾ || ೧೬ ||

**ಹುಲಿ:**—ಅಯ್ಯೋ! ಆ ದನ ಬಾರದೆ ಹೋದರೆ, ಬಿಟ್ಟೇನೆಂತ ಮಾಡಿದ್ದಿರೋ? ಕೊಟ್ಟ ಮಾತಿಗೆ ತಪ್ಪಿ ಆ ಕೆಟ್ಟ ದನ ಬಾರದೆ ಹೋದರೆ ಆ ಕ್ಷಣವೇ ಗೊಲ್ಲನ ಪಟ್ಟಣವನ್ನು ಹೊಕ್ಕು ಹಟ್ಟಿಕೊಟ್ಟಿಗೆಗಳನ್ನು ಕುಟ್ಟಿ ಮುರಿದು ಎಲ್ಲಾ ದನಗಳನ್ನು ಎಳೆದುಸೆಳೆದು ಕೊಂದುತಿಂದು ಸೇಡನ್ನು ತೀರಿಸಿಕೊಳ್ಳುವೆನು.

**ಗುರುದೇವ:**—ಹಾ, ಸಮಾಧಾನಮಾಡಿ, ಅಷ್ಟು ಹಾರಾಟ ಬೇಡ. ಆದರೆ ಅದು ಬರುವ ವರೆಗೆ ಈಗೇನು ಮಾಡುತ್ತೀರಿ?

**ಹುಲಿ:**—ಹಾಗೋ! ಹೇಳುತ್ತೇನೆ ಕೇಳಿ.

॥ ಮಾರವಿ — ಏಕತಾಳ ॥

ಆ ದನಪೋದಾ ದಾರಿಯ ನೋಡುವೆ | ಮೋದದ ಮನದೊಡನೆ ||
ಹದಮಾದುಗುರನು ಹೊರಗಡೆನೀಡುವೆ | ಕದನಕೆ ದನದೊಡನೇ || ೧೭ ||

**ಹುಲಿ:**—ಆ ದನವು ಹೋದ ದಾರಿಯನ್ನೇ ಎದುರುನೋಡುತ್ತಾ, ಹರಿತವಾದ ಉಗುರುಗಳನ್ನು ಹೊರಕ್ಕೆ ಚಾಚಿ ಹಲ್ಲು ಬಾಯಿಗಳನ್ನು ಸರಿಪಡಿಸಿಕೊಳ್ಳುತ್ತಾ ಆ ದನವು ಬರುವ ಸಮಯವನ್ನು ನಿರೀಕ್ಷಿಸಿ ಕೊಂಡು ಗವಿಯ ಬಾಗಿಲಲ್ಲಿಯೇ ಕುಳಿತುಕೊಳ್ಳುವೆನು. ಹೋಗುವೆನು.

---

# ದುಃಖಸಮಾಧಾನ ಸಂಧಿ.

(ದನವು ಹಟ್ಟಿಯನ್ನು ಪ್ರವೇಶಿಸುವುದು.)

॥ ಭಾಮಿನಿ ॥

ಇತ್ತ ಕಡೆಗಾ ಪುಣ್ಯಕೋಟಿಯು | ಅತ್ತು ಕಣ್ಣೊಳು ನೀರು ಸುರಿಸುತ |
ಸುತ್ತಿದಾರಿಯು ತಪ್ಪಿ ಬಂತದು ಮತ್ತೆ ಕಳವಳಿಸೀ ||
ಸತ್ತೆನಯ್ಯೊ ಹ! ಹಾ! ಯೆನುತಲಿ |
ಮತ್ತೆ ಕರುವನ್ನಾರು ಸಲಹುವ |
ರಿತ್ತಪೋಗಲಿ ನಾನೆನುತ್ತತಿ ವೇಗದಲಿ ಬಂತೂ || ೧೮ ||

**ಪುಣ್ಯಕೋಟಿ:**— ಅಯ್ಯೋ! ನನ್ನ ದುರವಸ್ಥೆಯನ್ನು ಯಾರ ಹತ್ತಿರ ಹೇಳಲಿ? ಧಾರೆಯಾಗಿ ಕಣ್ಣೀರು ಇಳಿದು ಬಾತುಕೊಂಡ ಈ ಬೆಂದ ಮುಖವನ್ನು ನನ್ನ ಬಂಧುಗಳಿಗೆ ಹೇಗೆ ತೋರಿಸಲಿ? ನನ್ನ ಮಗುವನ್ನು ಯಾರು ಕಾಪಾಡುವರು? ಹೇ ದೇವರೇ! ಈ ಸಮಯದಲ್ಲಿ ನೀನೂ ಕೈಬಿಟ್ಟೆಯಾ! ಅಯ್ಯೊ, ನನ್ನ ಪೂರ್ವಾರ್ಜಿತ ಕರ್ಮದ ಫಲವೇ! ಇನ್ನೇನು ಮಾಡಲಿ ಸ್ವಾಮಿ? ಈಗ ನಾನು ಪುಣ್ಯದ ಕೋಟಿಯಲ್ಲ, ಪಾಪದ ಕೋಟಿಯಾದೆನಲ್ಲಾ!

**ಗುರುದೇವ:**— ಗೋಮಾತೆ, ನೀನು ಹೀಗೆ ದುಃಖಿಸುವುದರಿಂದ ಏನು ಫಲ? ಯಾವ ಯಾವ ಕಾಲಕ್ಕೆ ಏನೇನಾಗಬೇಕೋ ಅದನ್ನು ಮಾಡಿಸುವ ಕರ್ತಾರನು ಬೇರೆ ಇದ್ದಾನೆ. ಆ ಹುಲಿ ಆಗ ನಿನ್ನನ್ನು ಬಿಟ್ಟಿದ್ದೇ ನಿನ್ನ ಪೂರ್ವ ಪುಣ್ಯ. ದೇವರು ಎಂತಹ ಮಹತ್ಕಾರ್ಯವನ್ನು ತೃಣಕ್ಕೆ ಸಮನಾಗಿ ಮಾಡಬಲ್ಲನು. ಆತನನ್ನು ನಂಬಿ ಧೈರ್ಯಸ್ಥಳಾಗು. ನೀನು ಬಂದ ಕೆಲಸವನ್ನು ಬೇಗನೆ ತೀರಿಸಿಕೊಳ್ಳು.

**ದನ:**— ಒಳ್ಳೇದು! ಮಗುವನ್ನು ಕರೆಯುತ್ತಾ ಹೋಗುವೆನು.

(ಕರುವಿನ ಪ್ರವೇಶ,

॥ ಕೇತಾರಗೌಳ_ಅಷ್ಟತಾಳ ॥

ಕೊಟ್ಟಿಗೆಯೊಳಗಲ್ಲಿ ಕೊರಳೆತ್ತಿ ಕರುಪುತಾ |
ಹೊಟ್ಟೆಯ ಒತ್ತಿಕೊಂಡು ||
ನೆಟ್ಟನೆ ದಾರಿಯ ನೋಡುತ್ತ ಕುಳಿತಿತ್ತು |
ಕೆಟ್ಟೇನೆಂದತ್ತುಕೊಂಡೂ || ೧೯ ||

**ಕರು:**—ಅಯ್ಯಾ ಗುರುದೇವರೇ! ನನ್ನ ಅಮ್ಮನನ್ನು ಕಂಡಿದ್ದೀರೋ? ಈ ದಿನ ಬೆಳಗ್ಗೆ ಮೊಲೆ ಉಣ್ಣಿಸಿ ಹೋಗಿರುವಳು. ಇಷ್ಟು ದಿನ ಬೇರೆ ದನಗಳು ಬರುವ ಮುಂಚೆಯೇ ಬರುತ್ತಿದ್ದಳು. ಹೊತ್ತಿರುವಾಗಲೇ ಮೊಲೆ ಕೊಡುತ್ತಿದ್ದಳು. ಆದರೆ ಈ ದಿನ ರಾತ್ರಿ ಮೀರಿತು. ನನ್ನ ಅಮ್ಮನು ಎಲ್ಲಿಗೆ ಹೋಗಿರಬಹುದಯ್ಯಾ? ಒಂದು ವೇಳೆ ಏನಾದರೂ ಅಪಾಯ ಸಂಭವಿಸಿರಬಹುದೇ? ನಾನು ಹಸಿವಿನಿಂದ ಹೊಟ್ಟೆಯನ್ನು ಒತ್ತಿಕೊಂಡು ಆವಾಗಿನಿಂದಲೂ ದಾರಿ ನೋಡುತ್ತಿದ್ದೇನೆ. ಇನ್ನೂ ಬರಲಿಲ್ಲ. ಅಮ್ಮಾ, ನಮ್ಮಮ್ಮಾ, ನೀನೆಲ್ಲಿರುವೆ? ಓಹೋ! ಕೇಳುತ್ತದೆ; ಅಂಬೇ ಧ್ವನಿ! ಅದೇ ಧ್ವನಿ! ಬಂದಳಯ್ಯಾ ಬಂದಳು. ಈಗಲೇ ಅವಳನ್ನು ಎದುರ್ಗೊಂಡು ಮಾತನಾಡಿಸುವೆನು.

ಧಾಟಿ: (ಮಗನೇ ನಿನ್ನ ಪೋಲ್ವಾರಾರೂ | ವಿಗಡ ಭಟರೊಳಿನ್ನೂ)

॥ ನೀಲಾಂಬರ ಆಧಿತಾಳ ॥

ಅಮ್ಮಾ ನಿನಗೇ ತಡವೇನ್ ಬರಲೂ | ಸುಮ್ಮಗೇಕೇನಳುವೇ ||
ಒಮ್ಮೆ ಮಾತಾಡೆಲವೋ ಬೇಗ | ಮಿಮ್ಮಾ! ಕೊಡು
ತಾಯೇ || ೨೦ ||

**ಕರು:**— ಅಮ್ಮಾ! ಅಮ್ಮಾ! ನನ್ನ ಹೊಟ್ಟೆ ಮಿಮ್ಮಿಬೇಕೆಂದು ಅಳುತ್ತದೆ ಈ ದಿನ ನಿನಗೆ ಬರಲಿಕ್ಕೆ ಇಷ್ಟು ತಡವೇನಮ್ಮಾ? ಯಾರಾದರೂ ನಿನ್ನ ದಾರಿಗೆ ಮುಳ್ಳು ಹಾಕಿದರೋ? ಅಲ್ಲವಾದರೆ ಆ ಕಣ್ಣಿನಲ್ಲಿ ಅಷ್ಟು ಅಳುವಿನ ನೀರು ಇಳಿಯುವುದೇನಮ್ಮಾ? ನಿನಗೆ ಬಂದ ಕಷ್ಟವೇನೆಂಬುದನ್ನು ಹೇಳಿ ನನ್ನನ್ನು ಮುದ್ದಿಟ್ಟು ಮಾತನಾಡಿಸಬಾರದೇನಮ್ಮಾ?

॥ ಕೇತಾರಗೌಳ-ಅಷ್ಟತಾಳ ॥

ಮಗನೆ ಪೋಗುವೆ ನಾನು ಹಗೆಯಾದ ಹುಲಿ ಬಾಯ್ಗೆ ।
ಜಗದೊಡೆಯನು ಮುದದೀ ॥
ಬಗೆಬಗೆಯಲಿ ನಿನ್ನ ಸಲಹುವ ಬೇಗದಿ ।
ಹಗಲಿರುಳಲಿದಯದೀ ॥ ೨೧ ॥

**ಪುಣ್ಯಕೋಟಿ:**— ಮಗನೇ, ನಿನ್ನನ್ನು ಹೆತ್ತು ಮುತ್ತಿಟ್ಟು ಮೊಲೆ ಕೊಟ್ಟು ಸಲಹಿದ್ದೇನೆ. ಈಗ ಸಾಯಲಿಕ್ಕೆ ಸಿದ್ಧಳಾಗಿ ಹೊರಟಿದ್ದೇನೆ. ನಿನ್ನನ್ನು ದೇವರು ಹಗಲಿರುಳು ಕಾಪಾಡುತ್ತಾನೆ. ಆದ್ದರಿಂದ ಹೆದರಬೇಡ. ಕಂದಯ್ಯಾ! ನಾನು ಈಗಲೇ ಹೋಗಿ ಹುಲಿಯ ಬಾಯಿಗೆ ಬೀಳುತ್ತೇನೆ.

**ಕರು:**— ಅಮ್ಮಾ! ತಡಿ! ತಡಿ! ಬೇಡ, ಬೇಡ, ಹಾಗೆ ಮಾಡಬೇಡ.

॥ ನೀಲಾಂಬರಿ—ಆದಿತಾಳ ॥

ಹುಲಿಯ ಬಾಯ್ಗೆ ಬೀಳಲಿಲಿಯು । ಬಳಲೀ ಬಾಯಾರಿಹೆನೂ ॥
ಮೊಲೆಯನಮ್ಮಾ ಯಾರೂ ಕೊಡುವರ್ । ಎಲ್ಲಿ ಮಲಗಲಿನ್ನು
ನಾನು ॥ ೨೨ ॥

**ಕರು:**—ಅಮ್ಮಾ, ಆ ಕೆಟ್ಟ ಹುಲಿಯು ಬಾಯಿಗೆ ಇಲಿಯು ಬೀಳಲಿ. ನೀನು ಸತ್ತರೆ ಆ ದುಃಖದಿಂದ ನಾನು ಬೆಂಡಾಗಿ ಬಾಯಾರಿ ಅಂಬೇ ಎಂದು ಕೂಗಿದರೆ ನೀನಲ್ಲದೆ ನನಗೆ ಮೊಲೆ ಕೊಡುವವರು ಬೇರೆ ಯಾರಿದ್ದಾರಮ್ಮಾ? ಇನ್ನು ಮೇಲೆ ನಾನು ಯಾರನ್ನು ಅಪ್ಪಿಕೊಂಡು ಯಾರ ಹತ್ತಿರ ಮಲಗಲಮ್ಮಾ? ಹುಲಿಯು ಬಾಯಿಗೆ ಬೀಳ ಹೋಗುವ ನೀನು ನನ್ನನ್ನು ಕರಕೊಂಡು ಹೋಗ ಬಾರದೇನಮ್ಮಾ? ಅಲ್ಲವಾದರೆ ನೀನು ಹೋಗುವುದು ಬೇಡವಮ್ಮಾ.

॥ ಕೇತಾರ ಗೌಳ—ಅಷ್ಟತಾಳ ॥

ಕಂದ ಕೇಳೆಲೆ ನಿನಗೊಂದು ಮಾತನು ಹೇಳ್ವೆ ।
ಬಂಧು ಬಾಂಧವರಿಹರೂ ॥
ಮುಂದೆ ದಿನಗಳಲ್ಲಿ ಮುಂದಾಳಾಗಿರು ನೀನು ।
ಇಂದು ನೀಮರುಗದಿರೂ ॥ ೨೩ ॥

**ಪುಣ್ಯಕೋಟಿ:**-ಮಗನೇ ನಾನು ಹೇಳುವ ಬುದ್ಧಿಯ ಮಾತನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಯಾವಾಗಲೂ ಇತರರ ಕರುಗಳಿಗೆ ಹಾಯಲಿಕ್ಕೆ ಹೋಗಬೇಡ. ಎಲ್ಲರಲ್ಲಿಯೂ ಪೂಜ್ಯಬುದ್ಧಿಯಿಂದ ನಡೆದುಕೋ. ನಿನಗೆ ಹಾಕಿದ ತಿಂಡಿಯನ್ನು ತಿಂದು ತೃಪ್ತನಾಗು. ಮೇಯಲಿಕ್ಕೆ ಹೋಗುವಾಗ ಬರುವಾಗ ಹಿಂಡಿನಲ್ಲಿ ಹಿಂದೆ ಬೀಳಬೇಡ. ನಿನ್ನನ್ನು ನನ್ನ ಬಂಧುಗಳು ಕಾಪಾಡುವರು. ಅಳಬೇಡ ನಾನು ಮಾತ್ರ ಹೋಗುತ್ತೇನೆ.

॥ ನೀಲಾಂಬರಿ—ಆದಿತಾಳ ॥

ಯಾರೂ ಇದ್ದರೇನೂ ಅಮ್ಮ | ಯಾರೂ ಪೊರೆಯುವವರೂ ||
ದೂರಾ ಹೇಳುವವರು ಅವರು | ಬಾರೀ ಹಾಯೂವವರೂ || ೨೪ ||

**ಕರು:** – ಅಮ್ಮ, ನನ್ನ ಬಂಧುಗಳು ಕಾಪಾಡುತ್ತಾರೆಂದು ಯಾಕೆ ಸುಳ್ಳುಸುಳ್ಳಾಗಿ ಹೇಳುತ್ತೀ? ನೀನೇ ನೋಡುತ್ತಿ ನಾನು ಎಲ್ಲಿಯಾದರೂ ಅವರ ಹೊಟ್ಟೆಯ ಅಡಿಗೆ ಮುಖ ಮಾಡಿದೆನೆಂದರೆ ಉದ್ದವಾದ ಕೊಂಬುಗಳಿಂದ ನನ್ನನ್ನು ಹಾಯುವರು. ನನ್ನ ದೂರನ್ನು ನಿನ್ನ ಹತ್ತಿರ ಹೇಳುವರು. ಅಂಥವರ ಎಡೆಯಲ್ಲಿ ನಾನು ಹೇಗೆ ಬಾಳಲಿ? ನಿನಗೆ ನನ್ನ ಮೇಲೆ ಎಳ್ಳಷ್ಟು ಕರುಣೆಯಿಲ್ಲವೇ? ನನ್ನನ್ನೇಕೆ ಬಿಟ್ಟು ಹೋಗುವಿಯಮ್ಮ?

॥ ಕೇತಾರಗೌಳ—ಅಷ್ಟತಾಳ ॥

ಭಾಷೆಯ ಕೊಟ್ಟು ನಾ ಮೋಸವ ಗೈದರೆ |
ದೂಷೀಪರಲ್ಲವೇನೋ ॥
ದೋಷವು ಬರುವುದು ಕ್ಲೇಶವ ಬಿಡು ನೀನೂ |
ಪೋಷಿಸುವನು ಹರನೂ || ೨೫ ||

**ಪುಣ್ಯಕೋಟಿ:**— ಮಗನೇ, ನಾನು ಹುಲಿರಾಯಗೆ ಬೇಗನೆ ಬರುತ್ತೇನೆಂದು ಭಾಷೆಕೊಟ್ಟು ಬಂದಿದ್ದೇನೆ. ಈಗ ಹೋಗದಿದ್ದರೆ ನನ್ನನ್ನು ದೇಶದಲ್ಲೆಲ್ಲಾ ದೂಷಿಸುವರು. ಅಲ್ಲದೆ ಕೊಟ್ಟ ಭಾಷೆಗೆ ತಪ್ಪಿದರೆ ಕೆಟ್ಟದೋಷವೇ ಬರುತ್ತದೆ. ಸೃಷ್ಟಿಕರ್ತನಿಗೆ ನಾವು ಹಗೆಯವರಾಗು

ತ್ತೇವೆ. ಇದರಿಂದ ಕ್ಷತ್ರಿಯ ಜಾತಿಯಾದ ನಮ್ಮ ಕುಲಕ್ಕೆ ದೊಡ್ಡ ಕುಂದೇ ಉಂಟಾಗುತ್ತದೆ. ಸತ್ಯವನ್ನು ಹೇಳುವುದು, ಕೊಟ್ಟ ಭಾಷೆಯನ್ನು ಸಲ್ಲಿಸುವುದು ನಮ್ಮ ನಿತ್ಯದ ಕೆಲಸವಾಗಿದೆ. ಆದ್ದರಿಂದ ನೀನು ಚಿಂತಿಸಬೇಡ. ನಿನ್ನನ್ನು ದೇವರು ಕಾಪಾಡುತ್ತಾನೆ. ಧೈರ್ಯಮಾಡಿಕೊಳ್ಳು. ನಿನ್ನ ಕಣ್ಣೀರು ಒರಸಿದ್ದೇನೆ.

ಪದ್ಯದ ಧಾಟಿ- ಧ್ರುವಚರಿತ್ರೆಯಲ್ಲಿ

(ಇಂದುಸಮಾನವಕ್ತ್ರ | ಸುಂದರ ಕೋಮಲ ಗಾತ್ರ)

॥ ಖರಹರಪ್ರಿಯ—ಏಕತಾಳ ॥

ಹಿಂಡಿಯ ತಿಂದಂತೆಣಿಸಿ | ಗಂಡ್ಹುಲಿ ಬಾಯ್ಗೆ ಪೊಗುವೆನೂ ||
ಹಿಂಡಲು ಹಾಲನು ಬರಲೂ | ಗಿಂಡಿಯ ತುಂಬಿಸೆ ನೀನೂ || ೨೬ ||

**ಕರು:**—ಅಮ್ಮ, ಹುಲಿಯ ಬಾಯಿಗೆ ಬೀಳುವುದೆಂದರೆ, ಒಂದು ತುಂಡು ಹಿಂಡಿ ನನ್ನ ಬಾಯಿಗೆ ಬಿದ್ದಂತೆ ಎಂತ ಎಣಿಸಿ ಸಂತೋಷದಿಂದ ಬಾಲವನ್ನೆತ್ತಿಕೊಂಡು ಹೋಗಿ ನಾನು ಅದರ ಬಾಯಿಗೆ ಬೀಳುತ್ತೇನೆ. ನೀನಾದರೋ ಹುಲ್ಲು ಹುರುಳಿಕೊಟ್ಟು ನಮ್ಮನ್ನು ಕಾಪಾಡಿಕೊಂಡು ಬಂದ ಕಾಳಿಂಗ ಗೊಲ್ಲನಿಗೆ ಗಿಂಡಿ, ಕೊಡ ತುಂಬಾ ಹಾಲನ್ನು ಕೊಟ್ಟು ಊರಿಗೆ ಉಪಕಾರಿಯಾಗಿರು. ಹುಲಿಯ ಬಾಯಿಗೆ ಬೀಳಲಿಕ್ಕೆ ನನಗೆ ಅಪ್ಪಣೆ ಕೊಡು.

॥ ಭಾಮಿನಿ ॥

ಎಂಥ ಬುದ್ಧಿಯು ನನ್ನ ಕಂದಗೆ |
ಕಂತುಪಿತನೀ ಕಾಯೊ ಎನ್ನಯ |
ಅಂತರಂಗವ ಬಲ್ಲ ದೇವನೆ ಸಂತಸದಿ ನೀನೂ ||
ಇಂತ ಮಗುವಿನ ಮಾತ ಕೇಳುತ |
ಅಂತರಂಗದಿ ತಾನು ಯೋಚಿಸಿ |
ಅಂತು ಬಳಗವನೆಲ್ಲ ಎಬ್ಬಿಸಿ ಚಿಂತೆಗೊಳುತಿತ್ತೂ || ೨೭ ||

**ಪುಣ್ಯಕೋಟಿ:**—ಅಯ್ಯಾ, ಗುರುದೇವರೇ! ನನ್ನ ಮುದ್ದುಮಗುವಿನ ಬುದ್ಧಿಯಿಲ್ಲದ ಮಾತುಗಳನ್ನು ಕೇಳಿದರೆ ವಜ್ರಕ್ಕೆ ಸಮನಾದ ಗಟ್ಟಿ

ಮನಸ್ಸೂ ಕೂಡಾ ಕರಗಬೇಕು. ಇನ್ನೂ ಇದಕ್ಕೆ ಸಮಾಧಾನವನ್ನು ಹೇಳುತ್ತ ಕಾಲವನ್ನು ಕಳೆಯುವುದು ಧರ್ಮವಲ್ಲ. ಇದನ್ನು ನನ್ನ ಅಂತರಂಗವನ್ನು ಬಲ್ಲ ಮನ್ಮಥಜನಕನಾದ ಶ್ರೀಕೃಷ್ಣನೇ ಕಾಯುವನು. ಈಗ ರಾತ್ರಿ ಮೀರುತ್ತಾ ಬಂತು. ನನ್ನ ಬಂಧುಗಳು ನಿದ್ರೆಯಲ್ಲಿ ಕನಸು ಕಾಣುತ್ತಾರೆ. ಇವರನ್ನೆಲ್ಲಾ ಎಬ್ಬಿಸಿ, ನನ್ನ ದುರವಸ್ಥೆಯನ್ನು ಅವರಿಗೆ ತಿಳಿಸಿ, ಕರುವನ್ನು ಕಾದುಕೊಂಡಿರುವಂತೆ ಹೇಳಿ, ಎಲ್ಲರಿಂದಲೂ ಆಶೀರ್ವಾದವನ್ನು ಪಡೆದು, ಸತ್ಯವನ್ನು ಕಾಪಾಡಿಕೊಳ್ಳುವುದು ನನ್ನ ಮುಖ್ಯ ಧರ್ಮವಾಗಿದೆ. ಆದ್ದರಿಂದ ಬಂಧುಗಳನ್ನು ಎಬ್ಬಿಸಿ ಮಾತಾಡಿಸುತ್ತೇನೆ.

॥ ಕೇತಾರಗೌಳ—ಅಷ್ಟತಾಳ ॥

ಅಕ್ಕಾ ಬಾಗಿಯೆ ಏಳು ತಂಗಿ ನಾಗಿಯೆ ಕೇಳು |
ಆಕ್ಕರೆಯಿಂದೆಲ್ಲವಾ |
ಮಕ್ಕಳ ತೆರನೆ ನಮ್ಮಣ್ಣಾನ ಕಾಯಿರಿ |
ಪಕ್ಕನೆ ಪೋಪೆನಪ್ಪಾ ॥ ೨೮ ॥

**ಪುಣ್ಯಕೋಟಿ:**—ಅಕ್ಕ ಭಾಗೀರತಿಯಕ್ಕ, ತಂಗಿ ನಾಗು, ತುಂಗು, ಗಂಗು, ರಂಗು, ಎಲ್ಲರೂ ಕೇಳಿರಿ. ನನ್ನ ಮಾತನ್ನು ಲಾಲಿಸಿ ಕೇಳಿರಿಯಮ್ಮ. ನನ್ನ ಕರುವನ್ನು ನಿಮ್ಮ ಕರುವೆಂದೇ ಭಾವಿಸಿ ಪ್ರೀತಿಯಿಂದ ಕಾಪಾಡುತ್ತಾ ಬನ್ನಿರಿ. ಅದಕ್ಕೆ ಬೇರೆ ಯಾರೂ ಗತಿಯಿಲ್ಲ. ನಾನೀಗ ಕೊಟ್ಟ ಭಾಷೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಹೋಗುತ್ತೇನೆ.

॥ ಕೇತಾರಗೌಳ—ಅಷ್ಟತಾಳ ॥

ಮುಂದೆ ಬಂದರೆ ನೀವು ಒಂದಾಗಿ ಹೊರಬೇಡಿ |
ಕಂದನ್ನ ಮಮತೆಯಲೀ ||
ಹಿಂದೆ ಬಿದ್ದರೆ ನೀವು ಒದೆಯ ಬೇಡಿರಿ ಅಮ್ಮ |
ಚಂದದಿ ಪ್ರೀತಿರಲೀ ॥ ೨೯ ॥

**ಪುಣ್ಯಕೊಟಿ:**—ಎಲಾ! ನನ್ನ ಬಾಂಧವರಿರಾ, ಈ ಕರುವು ನಿಮ್ಮದೆಂದೇ ಭಾವಿಸಿಕೊಂಡು, ಹಿಂದಿನಲ್ಲಿ ಮುಂದಕ್ಕೆ ಮಾಡಿಕೊಂಡು, ಅದು

ತಂಟೆ ಮಾಡಿದರೂ ಕೂಡಾ ಹಾಯದೆ, ತುಳಿಯದೆ ನನಗಿಂತಲೂ ಹೆಚ್ಚಾದ ಪ್ರೀತಿಯಿಂದ ನಿಮ್ಮ ಹತ್ತಿರವೇ ಮಲಗಿಸಿಕೊಂಡು ಕರುವನ್ನು ಕಾಪಾಡುತ್ತಾ ಬರಬೇಕು.

**ತುಂಗು ದನ:**— ಅಮ್ಮ! ಪುಣ್ಯಮ್ಮ! ಹಾಗಾದರೆ ನೀವೆಲ್ಲಿಗೆ ಹೋಗುವಿರಮ್ಮಾ!

॥ ಕೇತಾರಗೌಳ—ಅಷ್ಟತಾಳ ॥

ಅಮ್ಮ ಪೋಗುವೆ ನಾನು ನಿಮ್ಮ ದರ್ಶನಪುಣ್ಯ ।
ಒಮ್ಮೆಗೆ ಅಂತ್ಯವಿದೂ ।
ಗುಮ್ಮವ್ಯಾಘ್ರಗೆ ಅನ್ನ ಒಮ್ಮೊಮ್ಮ ಭಯಮುನ್ನ ।
ಬೊಮ್ಮನ ಬರಹವಿದೂ ॥ ೩೦ ॥

**ಪುಣ್ಯಕೋಟಿ:**— ಅಮ್ಮ, ನಾನು ಈ ದಿನ ಬರುವಾಗ ನಿಮ್ಮ ಹಿಂಡಿನಿಂದ ಹಿಂದೆ ಬಿದ್ದ ಕಾರಣ ಒಂದು ಹುಲಿಯು ನನ್ನನ್ನು ಅಡ್ಡ ಕಟ್ಟಿ ಈಗಲೇ ಕೊಲ್ಲುವೆನೆಂದು ಬಾಯಿ ತೆರೆದಾಗ, ನನ್ನ ಮಗುವಿಗೆ ಮೊಲೆಯುಣ್ಣಿಸಿ ನಿಮ್ಮೆಲ್ಲರೊಡನೆ ಮಾತನಾಡಿ ಬೇಗನೇ ಬರುತ್ತೇನೆಂದು ನಂಬಿಸಿ ಬಂದಿರುತ್ತೇನೆ. ಗುಮ್ಮನಂತೆ ಭಯಂಕರವಾದ ಆ ಹುಲಿಯ ಬಾಯಿಗೆ ನಾನು ಅನ್ನವಾಗಿ, ಹೊರಟಿದ್ದೇನೆ. ನಿಮ್ಮನ್ನು ಇನ್ನು ನೋಡುವ ಪುಣ್ಯವು ನನಗಿಲ್ಲ. ಇದೇ ಕಡೆಯ ಬಾರಿ; ಇನ್ನು ನಾನು ಬದುಕುವ ಹಾಗಿಲ್ಲ. ಇದೆಲ್ಲಾ ನನ್ನ ಹಣೆಯಲ್ಲಿ ಬರೆದ ಬ್ರಹ್ಮನ ಬರಹವಾಗಿದೆ. ಇನ್ನು ಚಿಂತಿಸಿ ಫಲವಿಲ್ಲ. ದೇವರು ನಿಮ್ಮೆಲ್ಲರಿಗೂ ಒಳ್ಳೆಯದನ್ನು ಮಾಡಲಿ. ನಮ್ಮ ಗೊಲ್ಲನ ಹಟ್ಟಿಯನ್ನು ಮಕ್ಕಳು ಮರಿಯಿಂದ ತುಂಬಿಸುತ್ತ ಬನ್ನಿ. ನನ್ನ ಕರುವನ್ನು ಮಾತ್ರ ಬಿಟ್ಟು ಹಾಕಬೇಡಿ.

॥ ಭಾಮಿನಿ ॥

ಸಣ್ಣ ಕರುವನು ಬಿಟ್ಟು ಹೋಗುವೆ ।
ಮಣ್ಣುಗೂಡಿತು ಎನ್ನ ಬಾಳುವೆ ।
ಹೆಣ್ಣು ಜನ್ಮವು ಸಾಕು ತನಗೆಂದತ್ತು ದುಃಖದಲೀ ॥

ಪುಣ್ಯಕೋಟಿಯ ಮಾತ ಕೇಳುತ ।
ಕಣ್ಣಿನೊಳಗತಿ ನೀರ ಸುರಿಸುತ ।
ಪುಣ್ಯವತಿ ನೀ ಕಣ್ಣು ಹೋಯ್ತೆ ಮಗೆನುತ ಮರುಗಿದವೂ ॥ ೩೧ ॥

**ತುಂಗುದನ**:--ಅಮ್ಮ, ಪುಣ್ಯಕೋಟಿಯಮ್ಮ, ಹೆಣ್ಣು ಜನ್ಮವೇ ಸಾಕು. ನನ್ನನ್ನು ನೋಡಿ ಮರೆಯಬೇಕೆಂದು ಹೇಳಿ ಹೊರಟಿರುವಿರಿ. ನೀವು ಹೋದದ್ದೇ ಆದರೆ ನಮ್ಮ ಹಿಂಡಿಗೆ ಒಂದು ಕುಂದು ಬಂದಂತಾಗುವುದಲ್ಲವೇ? ನಮ್ಮೆಲ್ಲರಿಗೂ ನೀವು ಕಣ್ಣಿನೋಪಾದಿಯಲ್ಲಿ ಶ್ರೇಷ್ಠರಾಗಿದ್ದೀರಿ. ಇಂದಿಗೆ ನಾವು ಕಣ್ಣನ್ನೇ ಕಳಕೊಂಡು ಕುರುಡರಂತಾದೆವಲ್ಲ. ಅಯ್ಯೋ ದೇವರೇ, ಇಂತಹ ಪುಣ್ಯಮಾತೆಯನ್ನು ಕಳಕೊಂಡ ಭಾಗ್ಯಹೀನರು ನಾವಾದೆವಲ್ಲ! ಅಷ್ಟೆಯೇ.

॥ ಖರಹರಪ್ರಿಯ—ಏಕತಾಳ ॥

ಅತ್ತೆಯೆ ಕೇಳಿರಿ ನೀವು । ಅತ್ತಲು ಪೋಗಲು ಬೇಡಿ ॥
ಸತ್ತೇಹೋಗಲಿ ಹುಲಿಯು । ಮತ್ತಿಲ್ಲಿಗೆ ಬನ್ನಿರಿ ಬೇಗಾ ॥ ೩೨ ॥

**ರಂಗುದನ**:—ಹೇಮಾತೇ, ನೀನು ಬುದ್ಧಿ ಹೇಳುವುದರಲ್ಲಿ ನಮ್ಮ ಅತ್ತೆಗೆ ಸರಿಯಾದವಳು. ನೀನು ಆ ಹುಲಿ ಇರುವ ಕಾಡಿಗೆ ಹೋಗುವುದು ಬೇಡ. ಒಂದು ವೇಳೆ ಹೋದರೂ ಆ ಹುಲಿಗೆ ದಮ್ಮಯ್ಯ ಹಾಕಿ ತಪ್ಪಿಸಿಕೊಂಡು ಬಾ. ಏನೂ ಕರುಣೆಯಿಲ್ಲದೆ ನಿನ್ನನ್ನು ತಿನ್ನಲು ಬಗೆದ ಆ ಹುಲಿಯು ನೀನು ಹೋಗುವುದರೊಳಗೆ ಹೊಟ್ಟೆ ಒಡೆದು ಸತ್ತು ಹೋಗುವಂತೆ ನಾವೆಲ್ಲರೂ ಶಾಪಕೊಡುತ್ತೇವೆ. ಆ ಹುಲಿ ಸತ್ತು ಮಣ್ಣು ತಿಂದೇ ಹೋಗಲಿ!

॥ ಖರಹರಪ್ರಿಯ—ಏಕತಾಳ ॥

ಕತ್ತಲುಮೀರುತ ಬಂತು । ಸುತ್ತಲು ವ್ಯಾಘ್ರದ ಗುಂಪೂ ॥
ಮೆತ್ತನೆಕೊಲ್ವವು ನಿಮ್ಮ । ಮುತ್ತನು ಕೊಡಿರೊಂದಿಂಪೂ ॥ ೩೩ ॥

**ಗಂಗುದನ**:—ಅಮ್ಮಾ, ನೀವು ಖಂಡಿತವಾಗಿ ಹೋಗುತ್ತೀರಿ? ಅಯ್ಯೋ! ಕತ್ತಲು ಕವಿದುಕೊಂಡಿದೆ. ನೀವು ಹೊರಗೆ ಹೋದುದೇ ಆದರೆ ನಿಮ್ಮನ್ನು ಕೊಲ್ಲಲು ಎಷ್ಟು ಹುಲಿಗಳು ಗುಂಪುಕಟ್ಟಿಕೊಂಡಿರು

ವುವೋ ಏನೋ! ನೀವು ಬಾರದೆ ಹೋದರೆ ನಿಮ್ಮಂತೆ ನಾವು ಇನ್ನು ಯಾರನ್ನು ಮುದ್ದಿಸಬೇಕು? ಅವ್ಮಾ, ಒಂದು ಮುದ್ದಿಟ್ಟು ಹೋಗಿ ರಮ್ಮ!

**ಪುಣ್ಯಕೋಟಿ:**—ಅಪ್ಪಾ ಬಂಧುಗಳಿರಾ, ಸಮಾಧಾನಮಾಡಿರಿ. ಚಿಂತಿಸಿ ಫಲವಿಲ್ಲ. ನಮ್ಮೆಲ್ಲರನ್ನು ದೇವರೇ ಕಾಪಾಡಬೇಕು. ಹೋಗಿ ಬರುತ್ತೇನೆ.

**ಗುರುದೇವ:**—ಕಡೆಯ ಬಾರಿ ಕರುವಿನೊಡನೆ ಮಾತನಾಡಲಿ ಕ್ಕಿಲ್ಲವೇ?

**ಪುಣ್ಯಕೋಟಿ:**—ಅಯ್ಯಾ, ದುಃಖವೇ ಬಿಡುವುದಿಲ್ಲ. ಅಯ್ಯೋ! ಮಗನೇ ನಿನ್ನ ಯೋಗ್ಯತೆಯೋ! ನನ್ನ ಭಾಗ್ಯವೋ!

॥ ಭಾಮಿನಿ ॥

ಚಲ್ಲಕೇಳಿಲೆ ಇಲ್ಲೆ ನಿಲ್ಲೆಲೆ । ಮೆಲ್ಲಪೋಗುವೆ ನಾನು ಮುಂದಕೆ ।
ಹಳ್ಳಿಹಟ್ಟಿಯ ತುಂಬಿಸುತ ನೀಬಾಳೆಲೈ ಮಗನೇ ॥
ಎಲ್ಲ ದನಗಳ ಗೋಳಕೇಳುತ । ನಿಲ್ಲದತಿವೇಗದಲಿ ಹೊರಟಿತು ।
ಮೆಲ್ಲ ಗಲ್ಲದಿ ಅಪ್ಪಿ ಮೂಸುತ ಚೆಲ್ವ ಬಾಲಕನಾ ॥ ೩೪ ॥

**ಪುಣ್ಯಕೋಟಿ:**—ಮಗೂ ಚೆಲ್ಲಾ, ಕಂದಯ್ಯಾ, ಕೊನೆಯ ಮಾತನ್ನು ಹೇಳುತ್ತೇನೆ. ಇಗೋ, ನೀನು ಈ ಗೊಲ್ಲರ ಹಳ್ಳಿಯಲ್ಲಿ ಎಲ್ಲಾ ಗೋವುಗಳೊಡನೆ ಸುಖವಾಗಿ ಬದುಕಿರು, ನಾನು ಹೋಗುತ್ತೇನೆ. ಅಯ್ಯಾ, ಗುರುದೇವರೆ, ನನ್ನ ಮುದ್ದು ಚೆಲುವನನ್ನು ಅಪ್ಪಿಹಿಡಿದು ಮುದ್ದಿಡಿದ್ದಾಯಿತು. ಇನ್ನು ಈ ಎಲ್ಲಾ ದನಗಳ ಬಂಧುತ್ವವನ್ನು ಕಡಿದು, ಕೊಟ್ಟ ಭಾಷೆಯನ್ನು ಪಾಲಿಸುವುದಕ್ಕೋಸ್ಕರ ಕಾಡಿನ ಮಾರ್ಗ ವಾಗಿ ಹುಲಿ ಇರುವ ಠಾವನ್ನು ಹುಡುಕುತ್ತಾ ನಡೆದುಬಿಡುತ್ತೇನೆ. ಒಹೋ! ಕೇಳುತ್ತದೆ ಕೋಳಿಯ ಕೂಗು. ಬೆಳಗಾಗುತ್ತಾ ಬಂತು. ಆದ್ದರಿಂದ ಅತಿ ವೇಗವಾಗಿ ನಡೆದುಬಿಡುತ್ತೇನೆ.

---

## ೪. ಕರುಣಾ ಸಂಧಿ

॥ ಭಾಮಿನಿ ॥

ಆಗ ಬೇಗನೇ ಪೋಪ ದನವನು |
ಕೂಗಿ ತಡೆಯುತ ಗೊಲ್ಲನೋರ್ವನು |
ಬೇಗ ಹೇಳಲೆ ಎಲ್ಲಿ ಪೋಗುವೆಯೆನುತ ಬೆದರಿಸಿದಾ ॥
ಸಾಗ ಹೋದನು ಅದರ ಹಿಂದೆಯೆ |
ಬೇಗಬೇಗನೆ ಓಡುತೋಡುತ |
ಕೂಗಿ ಕರೆಯುತ ಬರಲು ಕಂಡನು ದೂರದಲಿ ಹುಲಿಯಾ ॥ ೩೫ ॥

(ಹಾಸ್ಯಗಾರ ತುಂಡು ಸೋಮಾರಿಯ ಪ್ರವೇಶ.)

**ಸೋಮಾರಿ:**— ಹೌದಯ್ಯಾ, ಗುರುದೇವರೇ, ಹೋಯ್ತೇ ಹೋಯ್ತು.

**ಗುರುದೇವ:**—ಏನು ಹೋಯ್ತು?

**ಸೋಮಾರಿ:** —ಮಳೆಗಾಲ ಹೋಯ್ತು, ಛಳಿಗಾಲ ಹೋಯ್ತು, ಆ ಬಾವನ ಕಿವಿಯೊಳಗೆ ಆನೆ ಹೋಯ್ತು. ಅದರ ಜೊತೆಗೆ ನಿಮ್ಮ ಗಂಜಿಯೂ ಹೋಯ್ತು.

**ಗುರುದೇವ:** —ಹತ್, ಪುಕ್ಕ, ನಿನ್ನ ಕಿವಿಹಿಡಿದು ಹಿಂಡುತ್ತೇನೆ, ನೋಡು! ಇತ್ತ ಬಾ, (ಕಿವಿಹಿಡಿಯುವನು.)

**ಸೋಮ:**—ಆಯಿ, ಆಯಿ! ಅಲ್ಲ ಗುರುದೇವರೇ, ನಿಮ್ಮ ಗಂಜಿ ಅಲ್ಲ ನಮ್ಮ ಕಡೆಕಂಜಿ, (ಗಂಜಿ) ಹೋಯ್ತು.

**ಗುರುದೇವ:**—ಹೇಗೆ ಹೋಯ್ತು?

**ಸೋಮ:** – ನನ್ನ ಕಿವಿ ಬಿಟ್ರೆ ಹೇಳುತ್ತೇನೆ.

**ಗುರುದೇವ:**—ಸಾಯತ್ರ, ನಿನ್ನ ಕರ್ಮ, ಹೇಳು ನೋಡುವ.

**ಸೋಮ:**—ಹಾ! ನಿಮಗೆ ನನ್ನ ಹೆದರಿಕೆ ಅಷ್ಟು ಬೇಕು. ನಾನೇನು ಸಾಮಾನ್ಯ ಎಂತ ಮಾಡಿದ್ದೀರೋ? ನಾನು ಯಾರೆಂದು

ನಿಮಗೆ ಗೊತ್ತಿದೆಯೋ? ಈ ಕೋಟೆ ಬಾಗಿಲು ಕಾಯುವ ತುಂಡು ಸೋಮಾರಿ ಗೊಳ್ಳ ಎಂದರೆ ನಾನೇ ಗೊತ್ತಾಯಿತೋ, ಈಗ ಎಲ್ಲರೂ ನನಗೊಂದು ಸಲಾಂ ಕೊಡಿರಿ ನೋಡುವ—ಹಾಗಲ್ಲ ಹೀಗೆ ವನ್, ಟೂ, ತ್ರೀ, ಬದನೆಕಾಯಿ ಫ್ರೀ.

**ಗುರುದೇವ**:—ಏನೋ ತಮಾಷೆ ಮಾಡುತ್ತೀಯಾ? ನೀನು ಬಂದ ಕಾರ್ಯವೇನೆಂಬುದನ್ನು ಮುಂಚೆ ಹೇಳು.

**ಸೋಮ**:—ಬಂದ ಕಾರ್ಯ ಮುಂಚೆಯೇ ಹೇಳಿದ್ದೇನಲ್ಲ, ಹೋಯ್ತೇ ಹೋಯ್ತು! ನಮ್ಮ ಕಾಳಿಂಗರಾಜನ ಪುಣ್ಯಕೋಟಿ ದನ. ನನ್ನ ಕೈಯಲ್ಲಿ ಹೇಳದೆ ಕೋಟೆಯ ಬಾಗಿಲು ದಾಟಿ ಕಾಡಿಗೆ ಓಡಿ ಹೋಯ್ತು. ಪದ್ರಾಡ್ ಪಾಡಿತು.

**ಗುರುದೇವ**: –ಅದನ್ನು ತಡೆಯದೆ ಯಾಕೆ ಬಿಟ್ಟ? ಎಲ್ಲಿಯಾದರೂ ಹುಲಿಯ ಬಾಯಿಗೆ ಬಿದ್ದರೆ ನಿನ್ನ ಚಾಕರಿಗೆ ರಾಜಿಕೊಡಬೇಕಾದೀತಲ್ಲಾ?

**ಸೋಮ**:–ಹೌದಯ್ಯ ಗುರುದೇವರೇ, ನಾನು ಊಟಮಾಡೋದು ತಂಗಳನ್ನವೇ! ಮೊಸರನ್ನವೇ! ಹೀಗೆಯೇ ಬಿಟ್ಟೇನೆಂತ ಮಾಡಿದ್ದೀರೋ? ಇದೇನು ಬೆಳ್ಳಿ ಮೀಸೆ ಎಂತ ತಿಳಿದುಕೊಂಡಿರೋ? ಈಗಲೇ ಅದರ ಬೆನ್ನಟ್ಟಿ, ಆದನ್ನು ಬೆದರಿಸಿ, ಅದರ ಬಾಲದಲ್ಲಿ ಹಿಡಿದು, ಬುರುಬುರು ಎಳೆದು ತಂದು ಹಟ್ಟಿಯಲ್ಲಿ ಕಟ್ಟದಿದ್ದರೆ ನನ್ನ ತುಂಡುಸೋಮಾರಿ ಎಂಬ ಹೆಸರಿಗೆ ಒಂದು ಡಜೆ ಹೊಡೆಯಿರಿ. ಕಟ್ಟಿಯೇ ಬಿಡುತ್ತೇನೆ ನೋಡಿ.

**ಗುರುದೇವ**:—ಒಳ್ಳೇದು ಹಾಗಾದರೆ ಹೋಗುತ್ತಿರೋ?

**ಸೋಮ**:—ಹೋಗುತ್ತೇನೆ. ತೈತೈದತಾ, ಕುಡುತತ್ತೈ! ಗುರುದೇವರೇ ಹಾರಿ ಹೋಗುತ್ತೇನೆ. ಏ ದನವೇ, ಅಲ್ಲಿಯೇ ನಿಲ್ಲು. ಅಂಬೇ ಬಾ, ಬ್ಬ, ಬ್ಬ! (ಎಂದು ಓಡಿಸಿಕೊಂಡು ಹೋಗುವನು. ಹುಲಿಯನ್ನು ಕಂಡು ನಿಲ್ಲುವನು.)

**ಸೋಮ**: – ಓ ಗುರುದೇವರೇ, ಅಬ್ಬಬ್ಬಾ, ಅಲ್ಲಿ ನೋಡಿದಿರೋ,

ಬಾಯಿ ಕಳೆದುಕೊಂಡು ಕೂತದೆ ಸ್ವಾಮಿ,—ದೊಡ್ಡ ಹುಲಿ. ನನ್ನನ್ನ ನುಂಗಿ ಬಿಟ್ಟರೆ ಮೋಸ. ನಾನು ನಿಮ್ಮ ಹಿಂದೆ ಅಡಗಿಕೊಳ್ಳುತ್ತೇನೆ.

**ಗುರುದೇವ:**—ಇಷ್ಟೆಯೋ ನಿಮ್ಮ ಧೈರ್ಯ? ನೋಡಿ, ನಾನು ಈಗ ಆ ಹುಲಿಯ ಹತ್ತಿರ ಮಾತಾಡುತ್ತೇನೆ.

|| ಭಾಮಿನಿ ||

ಬಳಿಕ ವನದೊಳು ದಾರಿ ನೋಡುತ !
ಕುಳಿತ ಹುಲಿ ತಾ ಭ್ರಮೆಯಗೊಂಡತಿ |
ಕಳವಳಿಸಿ ಬಲುಮೋಸವಾಯ್ತೆಂದೆನುತ ಮರುಗುತಲೀ ||

ಬಳಲಿ ಬೆಳಸಿದ ಬಾರಿ ಫಲವದು |
ಬಳಸಬರಲದು ಮಾಯವಾದರೆ |
ಬಳಿಕವಾಗ್ಯದು ದುಃಖವಂತೆಯೆ ಆಯ್ತು ತನಗೀಗಾ || ೩೬ ||

**ಹುಲಿ:**—ಹೌದಯ್ಯ ಗುರುದೇವರೆ, ನಿಮ್ಮ ಬಾಯಿಗೆ ಯಾರು ಬೀಗ ಹಾಕಿದರು? ಏನು ಮಾತನಾಡುವುದಿಲ್ಲ?

**ಗುರುದೇವ:**—ಯಾರದು, ಹುಲಿರಾಯರೇ? ನಾನೂ ಅದೇ ಆಲೋಚನೆಯಲ್ಲಿ ಇದ್ದೇನೆ ಸ್ವಾಮಿ. ಇನ್ನು ಬರಲಿಲ್ಲ ಅಲ್ಲವೋ, ಏ ದನವೇ? ನಿನ್ನ ಧೈರ್ಯವೇ!

**ಹುಲಿ:**—ನಿಮ್ಮಂತಹವರನ್ನು ನಂಬಿದರೆ ನಮ್ಮ ತಲೆಗೆ ಚೊಂಬು. ಸಾಧುಪ್ರಾಣಿ, ಗೋಮಾತೆ, ಪೂಜೆಯ ದೇವತೆ, ಪುಣ್ಯಕೋಟಿ, ಓಹೋಹೋ ಭಾರಿ ಹೊಗಳಿದಿರಲ್ಲಾ. ಈಗ ಬಂತೋ ಹೇಗೆ?

**ಗುರುದೇವ:**—ಈಗ ಬರಲಿಲ್ಲ, ಇನ್ನು ಬಂದೀತು ನೋಡುವ, ಜೀವದ ಆಸೆ ಇದ್ದರೆ ಬಂದೀತು.

**ಹುಲಿ:**—'ಈಗ ಬರಲಿಲ್ಲ ಇನ್ನು ಬಂದೀತು,' ಇದು ಒಳ್ಳೆಯ ಉದಯರಾಗ. ಇನ್ನು ಯಾವಾಗ ಬರುವುದು? ಅತ್ತ ನೋಡಿ ಬೆಳಗಾಗುತ್ತ ಬಂತು.

**ಗುರುದೇವ:**—ಹಾಗಾದರೆ ಈಗೇನು ಮಾಡುತ್ತೀರಿ?

**ಹುಲಿ:**—ಮಾಡುವುದೇನು? ದನಕ್ಕೆ ಜಾಮೀನು ನಿಂತ ನಿಮ್ಮನ್ನೇ ಹಿಡಿದು ನುಂಗಿಬಿಡುತ್ತೇನೆ.

**ಗುರುದೇವ:**—ಯಾರು? ನಾನು ಜಾಮೀನು ನಿಲ್ಲಲೇ ಇಲ್ಲ. ಸರಿಯಾಗಿ ನೆನಪು ಮಾಡಿ. ದನ ಬಾರದೆ ಹೋದರೆ ಏನು ಮಾಡುವಿರೆಂದು ಕೇಳಿದ್ದಕ್ಕೆ ಹಟ್ಟ ಕೊಟ್ಟಿಗೆ ಮುರಿದು ಎಲ್ಲಾ ದನಗಳನ್ನು ತಿಂದು ತೇಗುವೆನೆಂದು ಎದೆತಟ್ಟಿದ ಹುಲಿರಾಯರು ನೀವೇ ಅಲ್ಲವೋ!

**ಹುಲಿ:**—ಹೌದಯ್ಯ! ಈಗ ನೋಡುವಾಗ ನಾನೇ ಜಾರಿಬಿದ್ದೆ. 'ಕ್ಷೌರ ತೆಗಿಸಿ ದಿನ ಕೇಳಿದ ಗಾದೆ'ಯಾಯಿತು. ಇನ್ನು ಮನಸ್ಸಿನಲ್ಲಿ ಚಿಂತಿಸಿ ಏನು ಫಲ? ಕಷ್ಟಪಟ್ಟು ಬೆಳಸಿದ ಫಲವು ಬಾಯಿಗೆ ಹಾಕಲಿಕ್ಕೆ ಹೋಗುವಾಗ ಅದು ಮಾಯವಾದರೆ ಎಷ್ಟು ವ್ಯಸನವಾಗುವುದು? ಅಂತೆಯೇ ನನ್ನ ಅವಸ್ಥೆಯಾಗಿದೆ. ಆ ದನವು ಮೋಸಮಾಡಿತು. ಅದನ್ನು ಬಿಟ್ಟದ್ದೇ ನನ್ನ ತಪ್ಪು. ನನ್ನಂತಹ ಮೂರ್ಖರು ಇನ್ಯಾರಿರುವರಯ್ಯಾ?

॥ ಭಾಮಿನಿ ॥

ಬಂದು ಸೇರಿದ ಒಂದು ತುತ್ತನು ।
ಮಂದಭಾಗ್ಯನು ಬಿಟ್ಟು ಕಳೆದೆನು ।
ಮುಂದೆ ಬರುವುದೆ ಕನಸಿನಲಿ ಆದುಯೆಂದು ಆಕಳಿಸೀ ॥
ಒಂದು ದಿನದಲಿ ಒಂದು ನರಿ ತಾ ।
ಬಂದು ಸೇರಿತು ದ್ರಾಕ್ಷೆಬಳ್ಳಿಯ ।
ತಿಂದುಹೋಗಲು ಆಗಲಾರದೆ ದ್ರಾಕ್ಷೆಹುಳಿಯೆಂದೂ ॥ ೩೭ ॥

ಅಂದು ಹಣ್ಣನು ಬಿಟ್ಟು ಓಡಿದ ।
ಅಂದದಲಿ ಹುಲಿ ತನ್ನ ಮನದಲಿ ।
ಇಂದು ಬಂದರೆ ದನವ ಮುಟ್ಟೆನು ಎಂದು ಕುಳಿತಿತ್ತೂ ॥
ಎಂದು ಮನದಲಿ ಕೂಗಿ ಮರುಗುವ ।
ಸಂದುಮುಗಿವಷ್ಟರಲಿ ಬೇಗನೆ ।
ಒಂದು ಕೇಳಿತು ಅಂಬೆ ಎಂದಾ ದನದ ಕೂಗಾಗ ॥ ೩೮ ॥

**ಹುಲಿ:**—ಹಾ! ಬಾಯಿಗೆ ಬಿದ್ದ ತುತ್ತನ್ನು ಉಗುಳಿಬಿಟ್ಟೆನು. ನನ್ನಂತಹ ಭಾಗ್ಯಹೀನರು ಇನ್ನಾರಿದ್ದಾರಯ್ಯ! ಮುಂದೆ ಕನಸಿನಲ್ಲಿಯೂ ಅಂಥಾ ಕೊಬ್ಬಿದ ದನ ಸಿಕ್ಕುವುದುಂಟೆ! ಈ ಸಮಯ ಅದನ್ನು ತಿನ್ನುತ್ತಾ ಅದರ ರಕ್ತವನ್ನು ಪಾನಮಾಡುತ್ತಾ ಇರುವ ಈ ಬಾಯಿಯಿಂದ ಈಗ ಹಾ! ಹಾ! ಎಂದು ಸುಮ್ಮನೆ ಆಕಳಿಸಿ ನೊಣಹೊಡೆಯುತ್ತಾ ಕುಳಿತು ಕೊಳ್ಳಬೇಕಾಯಿತಲ್ಲ. ಅಯ್ಯೋ ನನ್ನ ಮಂದಭಾಗ್ಯವೇ! ನನ್ನ ಅವಸ್ಥೆಯೇ?

**ಗುರುದೇವ:** ನಿಮ್ಮ ಅವಸ್ಥೆ ಹೇಗಾಯಿತು?

**ಹುಲಿ:**—ಕೇಳಿ ನನ್ನ ಅಜ್ಜ ಹೇಳುತ್ತಿದ್ದ ಕಥೆ. ನೋಡಿ, ಒಂದು ಕಾಡಿನಲ್ಲಿ ನನ್ನಂತೆಯೇ ಮುದಿಯಾದ ಒಂದು ನರಿ ಇತ್ತಂತೆ. ಅದು ಒಂದು ಹಳ್ಳಿಗೆ ಹೋಯ್ತಂತೆ. ಅಲ್ಲಿ ಒಂದು ದ್ರಾಕ್ಷೆ ಹಣ್ಣಿನ ಗೊಂಚಲನ್ನು ತಿನ್ನಬೇಕೆಂದು ಬಲುಹೊತ್ತು ಚಪ್ಪರದ ಮೇಲೆ ಹಾರಿ ತಂತೆ. ಆದರೆ ಒಂದೂ ಹಣ್ಣು ಅದರ ಬಾಯಿಗೂ ಬಾಲಕ್ಕೂ ಎಟಕ ಲಿಲ್ಲವಂತೆ. ಆಗ ಅದು 'ಛೀ, ಈ ಹುಳಿದ್ರಾಕ್ಷೆ ನಾನು ತಿನ್ನುವುದೋ? ಛೇ! ಬೇಡವೇ ಬೇಡ' ಎಂದು ಬಾಲದಿಂದ ಬಳ್ಳಿಯನ್ನು ದೂಡಿ ಬಿಲ ವನ್ನು ಸೇರಿತಂತೆ. ಅಂತೆಯೇ ನಮ್ಮ ಕಥೆ.

**ಗುರುದೇವ:**—ಆ ಕಥೆಗೂ ನಿಮ್ಮ ವ್ಯಥೆಗೂ ತಾಳ ಸರಿ ಇದೆ. ಹಾಗಾದರೆ ಈಗೇನು ಮಾಡುತ್ತೀರಿ?

**ಹುಲಿ:**—ಮಾಡುವುದೇನು ನನ್ನ ಕರ್ಮ? ಇನ್ನು ಅದೇ ಆಲೋ ಚನೆ ಮಾಡಿದರೆ ನನಗೆ ಹುಚ್ಚುಹಿಡಿಯುವುದರಲ್ಲಿ ಸಂಶಯವಿಲ್ಲ. ಆದ ರಿಂದ ಮನಸ್ಸನ್ನು ಆದಷ್ಟು ಬಿಗಿಹಿಡಿದುಬಿಡುತ್ತೇನೆ. ಒಂದು ವೇಳೆ ಆ ದನವು ಕೋಟಿಪುಣ್ಯದಿಂದ ತುಂಬಿರುವುದಾದರೆ ಅದನ್ನು ಕೊಂದು ಈ ಮುದಿಪ್ರಾಯದಲ್ಲಿ ಯಾಕೆ ಕೋಟಿ ಪಾಪವನ್ನು ಗಂಟುಕಟ್ಟಿಕೊಳ್ಳ ಬೇಕು? ಹೇಗೂ ಅದನ್ನು ಬಿಟ್ಟಾಯಿತು. ಆದದ್ದೆಲ್ಲ ಒಳ್ಳೆಯದಕ್ಕೆಂದು ಭಾವಿಸುವುದು ಸಾಧುಗಳ ಧರ್ಮ. ಇನ್ನು ಬಂದರೆ ಖಂಡಿತವಾಗಿಯೂ ಅದನ್ನು ಕೊಲ್ಲೆನು. ಅದರ ಆಸೆಯೇ ಕಡಿದುಬಿಟ್ಟೆನು. ಮೂರು ಮೂರು ಮಾತಿಗೂ ಬಿಟ್ಟೆನು.

**ಗುರುದೇವ:**—ಒಂದು ವೇಳೆ ಅದು ಬರುವುದಾದರೆ ಈಗಲೇ ಬರಬೇಕು. ಇಲ್ಲವಾದರೆ ಆದರ ಆಸೆ ನಾನೂ ಬಿಟ್ಟೆನು. ಇನ್ನು ಉಗುರನ್ನು ಸಿಂಬಿಯೊಳಕ್ಕೆ ಎಳೆದುಕೊಳ್ಳಿ; ಹೋಗುವ.

**ಹುಲಿ:**—ಓಹ್ಯೊ! ಆ ಕಡೆ ಕೇಳಿ, ಈ ಕಡೆ ಅಂಬೇ ಧ್ವನಿ ಕೇಳುತ್ತದೆ. ನಿಶ್ಚಯವಾಗಿಯೂ ಬಂತಯ್ಯ, ನನ್ನ ಭಾಗ್ಯದ ದನ.

**ಗುರುದೇವ:**—ಹೌದಯ್ಯ, ಇದೇನು ಆಶ್ಚರ್ಯ! ಇದು ನಿಮ್ಮ ಭಾಗ್ಯದ ದನವಲ್ಲ; ಪುಣ್ಯಕೋಟಿ ದನ. ಬಂತೇ ಬಂತು. ಶಹಭಾಸ್! ನಾನು ಆಗಲೇ ಹೇಳಿದ್ದೇನೆ. ಬರುವುದಾದರೆ ಈಗಲೇ ಬರಬೇಕು ಎಂತ. ಈಗ ಇದನ್ನು ಏನು ಮಾಡುತ್ತೀರಿ? ರಕ್ಷಣವೋ? ಇಲ್ಲವೆ ಭಕ್ಷಣವೋ?

|| ಭಾಮಿನಿ ||

ಸತ್ತಿಹೋಗೆಲೆ ದನವೆ ಬಂದೆಯ |
ಸುತ್ತದಾರಿಯ ನೋಡಿ ಬಳಲಿದೆ |
ಹೆತ್ತ ಅಬ್ಬೆಯ ಹೊಟ್ಟೆಯೊಳಡಗಿದರು ಬಿಡೆ ನಿನ್ನ ||
ಕುತ್ತಿಗೆಯ ನಾ ಹಿಡಿದು ತಿರುಹುತ |
ನೆತ್ತಿಯನ್ನೆಡಬಲದೊಳೊಡೆಯುತ |
ಮತ್ತೆ ಗುಂಡಿಗೆ ರಕ್ತವನು ಹೀರುವೆನು ಸುಖದಿಂದಾ || ೩೯ ||

**ಹುಲಿ:**—ಹೇ ದನವೇ! ನಿನ್ನನ್ನು ದಾರಿ ನೋಡಿ ನೋಡಿ ಸಾಕಾಯಿತು. ಇಷ್ಟರ ವರೆಗೆ ಎಲ್ಲಿಗೆ ಸತ್ತು ಹೋಗಿದ್ದೆ? ಹೇಳು. ನನ್ನ ಬಾಯಿಯಿಂದ ತಪ್ಪಿಸಿಕೊಳ್ಳುವುದಕ್ಕೆ ನೀನು ಇನ್ನೊಮ್ಮೆ ನಿನ್ನ ಹೆತ್ತ ತಾಯಿಯ ಹೊಟ್ಟೆಯೊಳಗೆ ಅಡಗಿ ಕುಳಿತುಕೊಂಡರೂ ಸಾಧ್ಯವಿಲ್ಲ. ನೋಡು, ಈ ನೀಡಿರತಕ್ಕ ಕೂರುಗುರುಗಳಿಂದ ನಿನ್ನ ನಾಡಿಯಲ್ಲಿ ಹಿಡಿದು ಒಡಲನ್ನು ಬಗೆದು ನೆತ್ತಿಯನ್ನೊಡೆದು ಗುಂಡಿಗೆಯನ್ನು ಸೀಳಿ ರಕ್ತವನ್ನು ಹೀರುವೆನು. ಆ ಮೇಲೆ ಸಂತೋಷದಿಂದ ತೇಗುವೆನು. ಸುಖದಿಂದ ಬಾಳುವೆನು.

**ಗುರುದೇವ:**—ಓಹೋ ಹುಲಿರಾಯ! ನಾಡಿನ ಜನರು ಆಡುವ ಮಾತು ಸುಳ್ಳಲ್ಲ. ಕೆಟ್ಟ ಜನರನ್ನೂ ದುಷ್ಟ ವ್ಯಾಘ್ರನನ್ನೂ ನಂಬ

ಕೊಡದೆನ್ನುವರು. ಯಾಕಂದರೆ ಈಗ ಸಭೆಯ ಎದುರಿನಲ್ಲಿ ನೀವೇ ಭಾಷೆಕೊಟ್ಟಿದ್ದೀರಿ. ಮೂರು ಮೂರು ಮಾತಿಗೂ ದನವನ್ನು ಕೊಲ್ಲೆನು ಎಂದೂ, ಪುಣ್ಯಕೋಟಿಯನ್ನು ಕೊಂದು ಪಾಪವನ್ನು ಕಟ್ಟಿಕೊಳ್ಳಲಿಕ್ಕಿಲ್ಲ ವೆಂತಲೂ ಎದೆತಟ್ಟಿದ್ದೀರಿ. ಈಗ ಬಾಯಿಕಳೆಯುತ್ತೀರಿ. ಸಾಯಲಿಕ್ಕೆ ಹೊಂಟ ನಿಮ್ಮಂಥಾ ಮುದುಕರಿಗೆ ಈ ಬುದ್ಧಿಯಾದರೆ ಇನ್ನು ನಮ್ಮಂಥಾ ಎಳೆನೆತ್ತರಿನವರ ಪಾಡೇನು? ನೋಡಿ, ದನಕ್ಕಾದರೂ ಆಡಿದ ಮಾತುಂಟು. ಅದು ಸತ್ಯವೇ ಮೂರ್ತಿ ಮತ್ತಾಗಿ ಬಂದು ನಿಂತಂತೆ ನಿಂತದೆ. ನೀವಾದರೋ ಆಡಿದ ಮಾತಿಗೆ ತಪ್ಪಿ ನಡೆಯುವವರು. ಇನ್ನು ನಿಮ್ಮ ಮುಖ ನೋಡಿದರೆ ನಾಳೆ ನಮಗೆ ಆಟ ಸಿಕ್ಕಲಿಕ್ಕಿಲ್ಲ.

**ಹುಲಿ:**— ಓಹ್ಯೊ! ನನ್ನ ಮಾತು ನೀವು ಪೂರ್ಣ ಗ್ರಹಿಸಲಿಲ್ಲ.

**ಗುರುದೇವ:**—ಹೌದು! ನಿಮ್ಮ ಭಾಷೆ ನಮಗೆ ಬರುವುದಿಲ್ಲ. ನೀವು ದೊಡ್ಡವರು. ನಿಮಗೆ ನಮಸ್ಕಾರ.

**ಹುಲಿ:**—ಗುರುದೇವ, ನಾನು ಬುದ್ಧಿ ಇಲ್ಲದವನೆಂದು ಭಾವಿಸಿ ನನಗೆ ಬುದ್ಧಿ ಹೇಳುವಿರೇ? ನಾನು ನಿಮ್ಮ ಬಾಯಿಯಿಂದ ಏನು ಬರುತ್ತ ದೆಂದು ನೋಡಬೇಕೆಂದೇ ಹಾಗೆ ಹೇಳಿದ್ದು. ನನ್ನ ಹೃದಯ ಹೇಗಿದೆ ಯೆಂದು ನಿಮಗೆ ಗೊತ್ತಿದೆಯೇ?

**ಗುರುದೇವ:**—ಈಗ ಆಲೋಚಿಸುವಾಗ ನಿಮ್ಮ ಹೃದಯವು ಬೂದಿ ಮುಚ್ಚಿದ ಕೆಂಡದಂತಿರಬೇಕೆಂದು ವ್ಯಕ್ತವಾಗುತ್ತದೆ.

**ಹುಲಿ:** ಅಲ್ಲಯ್ಯಾ! ಹಾಗೆ ಹೇಳಬೇಡಿ. ನನ್ನ ಒಡಲನ್ನು ನಿಮಗೆ ಬಿಚ್ಚಿ ತೋರಿಸುತ್ತೇನೆ.

|| ಭಾಮಿನಿ ||

ಆಸೆಯನು ನಾ ಬಿಟ್ಟ ಸಮಯದಿ |
ಮೋಸ ಮಾಡದೆ ಬಂತು ಈ ದನ |
ಘಾಸಿಸಿದರದನೆನಗೆ ಆಗದು ಲೇಸು ಸತ್ಯವಿದೂ ||
ಕಾಶಿಯಾತ್ರೆಯ ಪಡೆದ ಫಲವಿದು

ಕಾಸು ಕಳೆಯದೆ ಬಂತು ತನಗೆನೆ |
ಆಸೆಯಾ ಪಶುವಿಂಗೆಯಸುವಿತ್ತೀಗಪೆಸರ್ವಡೆವೇ || ೪೦ ||

**ಹುಲಿ:**— ಓ ಗುರುದೇವರೇ, ಏನು ಮಾತನಾಡುವುದಿಲ್ಲ, ಸಿಟ್ಟೋ?

**ಗುರುದೇವ:**—ರಾಯರ ಕೈಯಲ್ಲಿ ಮಾತನಾಡುವುದಕ್ಕೆ ನಮ್ಮ ಬುದ್ಧಿವಂತಿಗೆ ಸಾಕಾಗುವುದಿಲ್ಲ. ಯಾರು ಸಾಲ ಕೊಡುವರೆಂದು ಆಲೋಚಿಸುತ್ತಿದ್ದೇನೆ.

**ಹುಲಿ:**—ಹಾಗಾದರೆ ಕೇಳಿ, ಈ ದನವೆಂದರೆ ಗೋವಲ್ಲ, ಆಕಳಲ್ಲ. ನೀವು ಹೇಳಿದಂತೆ ಸತ್ಯದ ಒಂದು ಮೂರ್ತಿ. ಇಲ್ಲವಾದರೆ ನಾನು ಆಸೆ ಬಿಟ್ಟು ದೀಕ್ಷೆ ತೊಟ್ಟ ಮೇಲೆ ಇದೇಕೆ ಬರಬೇಕಿತ್ತು? ಮೋಸವೆಂದರೆ ಏನೆಂದು ಹೆಸರು ಸಹಾ ಕೇಳದ ಈ ದನವನ್ನು ಹೇಗೆ ಕೊಲ್ಲಲಿ ಸ್ವಾಮಿ?

**ಗುರುದೇವ:**—ಕುತ್ತಿಗೆಯಲ್ಲಿ ಹಿಡಿದು, ಹೊಟ್ಟೆಯನ್ನು ಬಗೆದು ಕೊಂದು ಬಿಡುವುದು. ಆ ಮೇಲೆ ತಿಂದುಬಿಡುವುದು

**ಹುಲಿ:**—ಹೇ ಶಂಭೋ! ಶಂಕರ! ಗುರುದೇವರೆ, ನಿಮ್ಮ ಮಾತು ಕರ್ಣ ಕಠೋರವಾಗಿದೆ. ಅಯ್ಯೋ ಗುರುದೇವರೆ, ನನಗೆ ಕೊಟ್ಟ ಭಾಷೆ ಯನ್ನು ಅನುಸರಿಸಿ ತನ್ನ ಪ್ರಾಣದ ಆಸೆಯನ್ನು ಬಿಟ್ಟು ಬಂದಂತಹ ಈ ದನ ಯಾರಿರ ಬಹುದು? ನಿಜವಾಗಿ ನೋಡಿದರೆ ನಾನು ಧರ್ಮದೇವತೆ ಯಾದರೆ ಅದು ನನ್ನ ತಂಗಿ, ಸತ್ಯದ ದೇವತೆ. ನನ್ನ ಒಡಹುಟ್ಟಿದವಳು ಎಂಬ ಕರುಣೆ ನನಗೆ ಹುಟ್ಟಿದೆ. ಆದ್ದರಿಂದ ಕಾಸು ಖರ್ಚು ಮಾಡದೆ ಕಾಶಿಯಾತ್ರೆ ಮಾಡಿದ ಫಲವನ್ನು ಪಡೆಯುವುದಕ್ಕಾಗಿ ಈ ದನವನ್ನು ಕೊಲ್ಲದೆ ಬಿಟ್ಟುಬಿಡುತ್ತೇನೆ. ಮಾತ್ರವಲ್ಲದೆ ಪಾಪದ ಕೂಪವಾದ ಈ ದೇಹವನ್ನು ಆ ಪುಣ್ಯಕೋಟಿ ದನಕ್ಕೆ ದಾನವಾಗಿ ಸಮರ್ಪಿಸಿ ಈ ಲೋಕದಲ್ಲಿ ಹೆಸರನ್ನು ಪಡೆದು ಪರಲೋಕದಲ್ಲಿ ಮುಕ್ತಿಯನ್ನು ಪಡೆ ಯಬೇಕೆಂದಿದ್ದೇನೆ.

**ಗುರುದೇವ:**— ಇದೀಗ ಒಳ್ಳೆಯ ಆಲೋಚನೆ. ಇದನ್ನೇ ಪೂರ್ವ

ಪುಣ್ಯವೆನ್ನಬೇಕು. ಆದರೆ ಈ ವಿಷಯದಲ್ಲಿ ದನದ ಅಭಿಪ್ರಾಯವನ್ನು ತಿಳಿದು ಬಿಡುತ್ತೇನೆ. ಹೇ ಪುಣ್ಯಕೋಟಿ ದನವೇ, ನೀನು ಬರಲಿಕ್ಕೆ ತಡ ಮಾಡಿ ನಿನ್ನ ಕೆಲಸ ಕೆಟ್ಟು ಹೋಯ್ತು. ಹುಲಿರಾಯರು ಸಿಟ್ಟಾಗಿದ್ದಾರೆ. ಬೇಗನೆ ಅವರನ್ನು ಮಾತನಾಡಿಸು. ತಕ್ಕ ಸಮಾಧಾನ ಹೇಳು.

---

## ಭಾಷೆ ಪರಿಪಾಲನಾಸಂಧಿ.

॥ ಮಾರವಿ—ಏಕತಾಳ ॥

ಮೌನವ ತಳೆದಿಹೆ ಯಾತಕೆ ಹುಲಿಯೆಲೆ | ಯೆನ್ನನೀಗ ನೀನೂ |
ಕಾನನದೊಡೆಯನೆ ಮಾನವನುಳಿಸಲೆ | ಜ್ಞಾನದಿ ಬಂದಿಹೆನೂ || ೪೧ ||

**ದನೆ:**—ಅಯ್ಯಾ ಹುಲಿರಾಯ! ನಾನು ಕೊಟ್ಟ ಭಾಷೆಗೆ ತಪ್ಪಿ ನಡೆಯಲು ಜ್ಞಾನವಿಲ್ಲದ ಅಜ್ಞಾನಿಯೆಂದು ಭಾವಿಸಿದಿರಾ? ಸ್ವಲ್ಪ ತಡ ವಾದ್ದಕ್ಕಾಗಿ ನನ್ನ ಮೇಲೆ ಸಿಟ್ಟಾಗುವುದು ಧರ್ಮವಲ್ಲ. ನೀವು ಈ ವನಕ್ಕೆ ರಾಯರಾಗಿದ್ದೀರಿ. ನಿಮ್ಮಲ್ಲಿ ಕ್ಷಮಾಗುಣವಿರುವುದು ವಿಹಿತ. ನೀವು ನನ್ನೊಡನೆ ಮಾತನಾಡದೆ ನನ್ನನ್ನು ಹಿಡಿಯಲಿಕ್ಕೂ ಬಾರದೆ ಇರುವುದನ್ನು ನೋಡಿದರೆ ನನಗೆ ಬಹಳ ವ್ಯಸನವಾಗುತ್ತದೆ. ನಾನು ಹೀಗೆಯೇ ಊರಿಗೆ ಹೋದರೆ 'ಹುಲಿಗೆ ತಪ್ಪಿಸಿ ಬಂದಳು. ಕೊಟ್ಟ ಭಾಷೆಗೆ ತಪ್ಪಿದಳು' ಎಂಬ ಅಪವಾದವು ನನಗೆ ಬರುತ್ತದೆ. ಆದ್ದರಿಂದ ನನ್ನನ್ನು ಕೊಂದು ಮಾನವನ್ನು ಉಳಿಸಿರಿ.

॥ ಮಾರವಿ—ಏಕತಾಳ ॥

ಒಡಲನು ಬಗೆಯಲೆ ಕುಡಿಯೆಲೆ ರಕ್ತವ |
ಕಡುತೋಷದಿ ನೀನೂ ||
ಬಿಡದಲೆ ಎನ್ನಯ ನುಡಿಯನು ಲಾಲಿಸಿ |
ಒಡನೆಯೆ ಬಡಿ ನೀನೂ || || ೪೨ ||

**ಪುಣ್ಯಕೋಟಿ:**—ಹುಲಿರಾಯ, ನನ್ನ ಮಾತನ್ನು ಲಾಲಿಸಿ ಕೇಳಬೇಕು. ನನ್ನನ್ನು ಒಮ್ಮೆಯೇ ಹಿಡಿದು, ಬಡೆದು, ಒಡಲನ್ನು ಸಿಗಿದು, ಗುಂಡಿಗೆಯನ್ನು ತೆಗೆದು, ರಕ್ತವನ್ನು ಕುಡಿದು, ಕಡು ಸಂತೋಷವನ್ನು ತಾವು ಪಡೆಯಬೇಕು.

॥ ಮಾರವಿ— ಏಕತಾಳ ॥

ಆಲೋಚನೆ ಬಿಡಿ ನೀವ್ ಮಾಡಿರಿ | ಮೇಲೂಟವನೀಗ |
ಕಾಲವು ಕಳೆಯಿತು ಬೆಳಗಾಗುತಲೀ | ಗಲೆ ಬಂತೈ ಬೇಗಾ || || ೪೩ ||

**ಪುಣ್ಯಕೋಟಿ:**—ಅತ್ತ ನೋಡಿ, ಬೆಳಗಾಗುತ್ತ ಬಂತು. ಇನ್ನು ತಡಮಾಡಬೇಡಿ, ಸುಮ್ಮನೆ ಆಲೋಚನೆಯಲ್ಲಿಯೇ ಕುಳಿತು ಕಾಲವನ್ನು ಕಳೆಯಬೇಡಿ. ಮೇಲಾದ ಊಟವನ್ನು ಮುಗಿಸಿರಿ. ನನ್ನ ಮಾತಿಗೆ ಉತ್ತರವನ್ನು ಕೊಡಿರಿ.

**ಗುರುದೇವ:**—ಹುಲಿರಾಯರೇ! ಇನ್ನೂ ತಲೆ ತೂಕಡಿಸುತ್ತಿರುವಿರೇನು? ದನದ ಭಾಷೆ ಬರುವುದಿಲ್ಲವೋ? ಅದಕ್ಕೆ ಉತ್ತರ ಕೊಡಿರಿ.

**ಹುಲಿ:**—ಗುರುದೇವರೇ, ಉತ್ತರ ಕೊಡಲಿಕ್ಕೆ ನನಗೆ ಬಾಯೇ ಬರುವುದಿಲ್ಲ ಅಹ! ಆದರ ಬುದ್ಧಿಯೇ! ಹೇ ಪುಣ್ಯಮಾತೆ, ಇತ್ತ ಬಾ.

॥ ಭಾಮಿನಿ ॥

ದನವೆ ನಿನ್ನನು ಕಂಡು ಎನ್ನಯ | ಮನಕೆ ವನಕೆಯೊಳೊದ್ದತೆರನಾ |
ಯ್ತೆನುತ ಎಂದಿಗು ಕೊಲ್ಲಲೆಣಿಸೆನು ಕನಸಿನಲಿ ನಿನ್ನಾ ||
ನೀನೆ ಎನ್ನಯ ಬಂಧುಬಳಗವು | ನೀನೆ ಸತ್ಯದ ಪೂಜ್ಯದೇವತೆ |
ನಿನ್ನ ಕೊಂದರೆ ಎನ್ನ ಮೆಚ್ಚನು ಮುನ್ನ ಶ್ರೀಹರಿಯೂ || ೪೪ ||

**ಹುಲಿ:**—ಏ ದನವೇ, ನಿನ್ನ ಆ ಜ್ಞಾನದ ಬುದ್ಧಿಯ ಮಾತನ್ನೂ, ಅದಕ್ಕೆ ಸರಿಯಾದ ಗುಣವನ್ನೂ, ಆ ದೇವತಾನುಗ್ರಹವನ್ನೂ ನೋಡಿ ನನ್ನ ಮನಸ್ಸಿಗೆ ಈಗ ಒನಕೆಯಿಂದ ಒದೆದಂತಾಗಿದೆ. ಇನ್ನು ನಿನ್ನನ್ನು ಈಗ ಬಿಡು, ಕನಸಿನಲ್ಲಿಯೂ ತಿನ್ನುವ ಆಲೋಚನೆಯೇ ಇಲ್ಲ. ನಿನ್ನನ್ನು

ತಿಂದದ್ದಾದರೆ ಶ್ರೀದೇವರಿಗೆ ನಾನು ದ್ವೇಷಿಗನಾಗುತ್ತೇನೆ. ನಿಜವಾಗಿ ನೀನು ನನ್ನ ಒಡಹುಟ್ಟಿದವಳು. ಅಕ್ಕನೋ ತಂಗಿಯೋ ಖಂಡಿತ ಹೇಳು. ನನಗೆ ನಿನ್ನ ಮೇಲೆ ಅಷ್ಟು ಕರುಣೆಹುಟ್ಟಿದೆ.

(ಮರೆಯಲ್ಲಿದ್ದ ತುಂಡುಸೋಮಾರಿ ಎದುರು ಬಂದು)

**ಸೊಮು:**—ಹೌದಯ್ಯ! ಗುರುದೇವರೇ, ಎರಡು ಪಾಮಾಣೆಗೆ ಒಂದು ಪ್ರಶ್ನೆ ಹೇಳಿ ನೋಡುವ. ನಾನು ಈ ಮರದ ಮರೆಯಲ್ಲಿ ನಿಂತು ಹೆದರಿ ಹೆದರಿ ಸತ್ತೆ, ಮತ್ತೂ ಮತ್ತು ಅತ್ತೆ. ಇಷ್ಟು ಯಾವದಕ್ಕಾಗಿ ಎಂತ ಹೇಳಿದರೆ ನೀವೀಗ ಘಟ್ಟಿಗರು.

**ಗುರುದೇವ:**—ಇಷ್ಟರ ವರೆಗೆ ಅತ್ತದ್ದು ಹುಲಿಗೆ ಹೆದರಿ ಎಂತ ಕಾಣುತ್ತದೆ.

**ಸೋಮು:**—ಛೇ! ಈ ಹೇಡಿ ಹುಲಿಗೆ ನಾನು ಇನ್ನು ಹೆದರಲಿಕ್ಕಿಲ್ಲ. ಅದಕ್ಕಾಗಿ ಅತ್ತದ್ದೇ ಅಲ್ಲ. ಈ ದನಕ್ಕೋಸ್ಕರವಾಗಿಯೇ ಅತ್ತದ್ದು. ಈ ದನವು ನನಗೆ ಅಕ್ಕನೋ ತಂಗಿಯೋ ಏನಾಗಬೇಕು ಖಂಡಿತ ಹೇಳಿ ನೋಡುವ.

**ಗುರುದೇವ:**--ಹೌದೆನಾ ಸೋಮು, ನೀನು ಮನುಷ್ಯ; ಅದು ಪಶು. ನಿನಗೆ ಅದು ಅಕ್ಕನಾಗಲೀ, ತಂಗಿಯಾಗಲೀ, ಆಗುವ ಬಗೆ ಹೇಗೆ?

**ಸೋಮು:**—(ಹುಲಿಯೊಡನೆ) ಹೌದಾ ಮಾಮಣ್ಣಯ್ಯ, ಹುಲಿ ರಾಯ! ಈ ಗುರುದೇವರು ಭಲೀ ಹುಶಾರು ಇದ್ದಾರೆ. ಕಂಡದ್ದು ಕಂಡ ಹಾಗೆ ಹೇಳುತ್ತಾರೆ. ನಾನು ಮನುಷ್ಯನಂತೆ, ಅದು ಪಶುವಂತೆ, ನೀವು ಹುಲಿರಾಯರಂತೆ. ನಾವು ಒಬ್ಬರೂ ಒಡ ಹುಟ್ಟಿದವರೂ ಅಲ್ಲ ವಂತೆ. ಇನ್ನು ಪುಣ್ಯಕೋಟಿಯನ್ನು ತಿನ್ನಬಹುದಷ್ಟೆ.

**ಹುಲಿ:**--'ಘರ್ರೂ' ಎಂದು ಹೆದರಿಸುವುದು.

**ಸೋಮು:**—ಅಬ್ಬಾ! ಅದರ ಬಾಯೆ! ನನಗೆ ಹೆದರಿಕೆಯಾಗುತ್ತದೆ. ನಾನು ನಿಮ್ಮ ಕಿಸೆಯೊಳಗೆ ಕೂತುಕೊಳ್ಳುತ್ತೇನೆ. ಹೌದಯ್ಯ!

ಆಗ ನಾಯಿಯಂತೆ ಸಾಧು, ಈಗ ಬೆಕ್ಕಿನಂತೆ ಜೋರು, ಇದೆಲ್ಲಿಯೋ ಬೆಕ್ಕಿನ ಜಾತಿಗೆ ಸೇರಿದ್ದಾಗಿರಬೇಕು. ನನ್ನನ್ನು ನುಂಗಲಿಕ್ಕೆ ಬರುತ್ತದೆ. ಇನ್ನು ನಾನು ಸಿಕ್ಕಿಯೇನೊ? ಮಣ್ಣು ತಿನ್ನು.

ಪದ್ಯದ ಧಾಟ(ಏಂದು ದುಶ್ಶಾಸನನು ಪೇಳಲಿ | ಕಂದು ಕೌರವ ನೃಪತಿಯನುಜಗೆ|)

‖ ಸೌರಾಷ್ಟ—ತ್ರಿವುಡೆ ‖

ಪುಣ್ಯಕೋಟಿಯೆ ಕೇಳು ಎನ್ನಯ |
ಕಣ್ಣಿನಲಿ ಇಳಿಯುವುದು ನೀರೆಲೆ |
ಕಣ್ಣು ಕಟ್ಟಿನ ಮಾತು ಅಲ್ಲವು | ಪುಣ್ಯಗಳಿಪೇ ‖ ೪೫ ‖

**ಹುಲಿ:**—ದನವೇ, ನಾನು ಕಣ್ಣು ಕಟ್ಟಿನ ಮಾತನಾಡುತ್ತೇನೆಂತ ಭ್ರಮಿಸಬೇಡ, ಗುರುದೇವರ ಸಾಕ್ಷಿಯಾಗಿ ಹೇಳುತ್ತೇನೆ, ನನ್ನ ಕೊರಳಾಣೆ, ನಿನ್ನನ್ನು ಕೊಲ್ಲಲಾರೆನು. ನನ್ನ ಕಣ್ಣೀರಿನಿಂದ ನನ್ನ ಶರೀರವನ್ನೇ ನಿನ್ನ ಪಾದಕ್ಕೆ ಧಾರೆ ಎರೆಯುವೆನು. ಯಾಕಂದರೆ,

‖ ಸೌರಾಷ್ಟ—ತ್ರಿವುಡೆ ‖

ಎಷ್ಟು ಗೋವ್ಗಳ ಕೊಂದೆನಾನಿ |
ನ್ನೆಷ್ಟು ಪ್ರಾಣಿಯ ತಿಂದು ತೇಗಿದೆ ‖
ಸೃಷ್ಟಿಯೊಳಗಡೆಯೆನ್ನ ತೆರನಹ । ದುಷ್ಟರಿಹರೇ ‖ ೪೬ ‖

**ಹುಲಿ:**-ಅಮ್ಮ, ನಾನು ಈ ವರೆಗೆ ಎಷ್ಟೋ ಪ್ರಾಣಿಗಳನ್ನು ಕೊಂದು ತಿಂದು ಪಾಪದ ಹೊರೆಯನ್ನು ಹೊತ್ತಿರುವೆನು. ಕಾರಣ ನನ್ನಷ್ಟು ದುಷ್ಟರು ಈ ಪ್ರಪಂಚದಲ್ಲಿ ಬೇರೆ ಯಾರೂ ಇರಲಿಕ್ಕಿಲ್ಲ. ಆ ಪಾಪದ ಭಾರವಾದ ಹೊರೆಯನ್ನು ಈ ಮುದಿಪ್ರಾಯದಲ್ಲಿ ಹೇಗೆ ಹೊರಲಿ? ಆದ್ದರಿಂದ ಅದನ್ನು ಈಗಲೇ ನಿನ್ನ ಕಾಲಬುಡದಲ್ಲಿಯೇ ಹೊತ್ತು ಹಾಕುತ್ತೇನೆ.

‖ ಖರಹಪ್ರಿಯ—ಏಕತಾಳ ‖

ಇಂದಿಗೆ ಸಾಕೆಲೆ ತಾಯೆ । ಎಂದಿಗು ಬೇಡೀಜನುಮ ‖
ಮುಂದಿನ ಬಂಡೆಗೆ ಬಿದ್ದು | ಹೊಂದುವೆ ಸೌಖ್ಯವನಮ್ಮಾ ‖ ೪೭ ‖

**ಹುಲಿ:**— ಅಮ್ಮಾ, ಈ ಪಾಪಿ ಹುಲಿ ಜನ್ಮವನ್ನು ಇಂದಿಗೆ ಅಂತ್ಯ ಪಡಿಸಬೇಕೆಂದಿದ್ದೇನೆ. ಅದಕ್ಕಾಗಿ ನಿನ್ನ ಎದುರಿಗಿರುವ ಬಂಡೆಗೆ ತಲೆ ಹೊಡೆದುಕೊಂಡು ಈಗಲೇ ಪ್ರಾಣವನ್ನು ಬಿಡುತ್ತೇನೆ. ಮುಂದೆ ದೇವರು ನನಗೆ ಒಳ್ಳೆಯದನ್ನು ಮಾಡಲಿ.

**ಗುರುದೇವ:**— ಏನಿದು ಹುಲಿರಾಯರೇ, ಬಂಡೆಗೆ ತಲೆ ಬಡೆದು ಸಾಯುವುದು, ನೇಣು ಕುತ್ತಿಗೆಗೆ ಹಾಕಿಕೊಂಡು ಸಾಯುವುದು ಇವೆಲ್ಲಾ ದುರ್ಮರಣಗಳು. ಹಾಗೆ ಸತ್ತವರಿಗೆ ಸಾಯುಜ್ಯ ಸಿಕ್ಕದು. ಹಾಗೆ ಸಾಯಬಾರದು.

**ಹುಲಿ:**— ಹಾಗಾದರೆ ಹೇಳುತ್ತೇನೆ.

॥ ಭಾಮಿನಿ ॥

ಏರಲೋ ಗಿರಿ ಬೆಟ್ಟವನುನಾ |
ಹಾರಲೋ ನಡುಮಡುವಿನಲಿತಾ |
ಸೇರೆ ತೊರೆಯೊಳಿನೆ ಆಸುವ ನಾನೆಂದೀಗ ಮರುಗುತಲೀ ||

ಮರದ ಕಾವದು ಮರಕೆ ಮೃತ್ಯುವ |
ತರುವ ತೆರದಲಿ ಆಯ್ತು ತನ್ನಯ |
ಹರಣ ಹೋದರೆ ಸಾಕು ಎಂದಿಗು ಮರೆಯೆ ದೇವರನೂ || ೪೮ ||

**ಹುಲಿ:**—ನನ್ನ ಪ್ರಾಣವನ್ನು ಹೇಗೆ ತೆಗೆದುಕೊಳ್ಳಲಿ? ಈ ಎತ್ತರವಾದ ಬೆಟ್ಟವನ್ನು ಹತ್ತಿ ನಡುವಿನ ಕಣಿವೆಗೆ ಹಾರಿ ಪ್ರಾಣ ಬಿಡಲೋ? ಇಲ್ಲವೇ ಹಳ್ಳಕ್ಕೆ ಹಾರಲೋ? ಅದೊಂದೂ ಸರಿಯಲ್ಲ. ಈ ದನದ ಕಾಲಿಗೆ ತಲೆ ಬಡೆದುಕೊಂಡು ಸಾಯುವುದೇ ಎಲ್ಲಕ್ಕಿಂತಲೂ ಮೇಲಾಗಿದೆ. ಕೊಡಲಿಯಲ್ಲಿರುವ ಮರದ ಕಾವೇ ಮರಗಳನ್ನು ಕಡಿಯಲಿಕ್ಕೆ ಹೇಗೆ ಸಹಾಯ ಮಾಡುತ್ತದೋ, ಹಾಗೆಯೇ ನನ್ನ ಮರಣಕ್ಕೆ ನಾನೇ ಕಾರಣನಾಗಿದ್ದೇನೆ. ಹೇಗಾದರೂ ಈ ಪ್ರಾಣವನ್ನು ಕಳೆದುಕೊಂಡರೆ ಸಾಕು.

|| ನೀಲಾಂಬರಿ—ಆದಿತಾಳ ||

ನಿಲ್ಲೆಲೆ ದನವೇ ಎಲ್ಲಿಗೆ ಓಡುವೆ । ಕೊಲ್ಲೆಲೆ ನನ್ನನ್ನು ||
ತಲೆತಲೆ ಬಡೆಯುತ ಕಾಲಿನ ಬುಡದಲಿ |
ತೊಲಗಿಪೆ ಪ್ರಾಣವನೂ || ೪೯ ||

**ಹುಲಿ:**—ಏ ದನವೇ, ನಿಲ್ಲು ನಿಲ್ಲು, ನನ್ನನ್ನು ಕೊಲ್ಲು ಕೊಲ್ಲು, ನಿನ್ನ ಕಾಲ ಬುಡದಲ್ಲಿಯೇ ತಲೆಯನ್ನು ಬಡಬಡನೆ ಬಡೆದುಕೊಂಡು ಪ್ರಾಣವನ್ನು ಬಿಡುವೆನು. (ಎಂದು ಹುಲಿ ದನದ ಕಾಲಿಗೆ ತಲೆಯನ್ನು ಬಡೆದುಕೊಳ್ಳುವುದು. ಓಡಿಸಿಕೊಂಡು ಹೋಗುವುದು.)

---

## ೬. ಸ್ವರ್ಗಪಥ ಸಂಧಿ

|| ಭಾಮಿನಿ ||

ಹಿಂಡು ಜನಗಳ ನಡುವೆ ಬಂದನು |
ತುಂಡು ಸೋಮನು ಈಗ ಬೇಗನೆ |
ಕಂಡವರು ನಗುವಂತೆ ಹಾಸ್ಯವನಾಡಿದನು ಬೇಗಾ ||
ಮಂಡೆ ಮಂಡೆಯು ಹೊಡೆದುಕೊಂಡನು |
ಗಂಡುವಿನ ಕಾಲ್ಗಳಿಗೆ ಬೇಗನೆ |
ಉಂಡು ಸ್ವರ್ಗಕೆ ಪೋಗುವೆನು ತಾನೆಂದು ಕೂಗಿದನೂ || ೫೦ ||

**ಸೋಮ:**—ನನಗೂ ಹುಲಿಗೂ ಪಂಥ. ಮುಂಚೆ ಸ್ವರ್ಗಕ್ಕೆ ಹೋಗುವುದು ಯಾರೆಂದು ನೀವು ನೋಡಬೇಕು. ಹುಲಿ ದನದ ಕಾಲಿಗೆ ತಲೆ ಬಡೆದುಕೊಂಡು ಸ್ವರ್ಗಕ್ಕೆ ಹೋಗುವುದು. ನಾನು ಈ ದೀವಟಿಗೆ ಹಿಡಿಯುವ ಗಂಡನ ಕಾಲ ಬುಡಕ್ಕೆ ಮಂಡೆ ಬಡೆದುಕೊಂಡು ಸ್ವರ್ಗಕ್ಕೆ ಹೋಗುವುದು. ನಮ್ಮಿಬ್ಬರ ಪೈಕಿ ಯಾರು ಹುಶ್ಯಾರ್ ಎಂದು ನೋಡಿ ಬಹುಮಾನಕೊಡಿ. ಡೊಂಡ್ಯ, ಚಂಡೆ ಹೊಡಿ. ನಾನು ಸ್ವರ್ಗಕ್ಕೆ ಹೋಗುವುದು ಕಾಣುವುದಿಲ್ಲವೋ? ಬೇಗ ಹೊಡಿ.

**ಗುರುದೇವ:**—ಸಾಕು. ಹುಲಿರಾಯರೇ, ಸ್ವಲ್ಪ ಸಮಾಧಾನ ಮಾಡಿ. ಮೇಲಿನಿಂದ ಅಶರೀರವಾಣಿ ಕೇಳುತ್ತದೆ; ಕಿವಿ ಕೊಡಿರಿ.

**ಸೋಮು:**—ಅಯ್ಯಾ ಗುರುದೇವ, ನಾನೇನು ನಿಮ್ಮ ಗಂಟು ತಿಂದಿದ್ದೇನೋ? ನನ್ನ ತಲೆ ಎಲ್ಲಾ ಬೋಳಾಯಿತು. ಆದರೂ ಮುಂಚೆ ನನಗೆ ಸಮಾಧಾನ ಹೇಳದೆ ಆ ಹುಲಿಗೆ ಹೇಳಲು ಕಾರಣವೇನು? ಇದು ಇತ್ಯರ್ಥವಾಗದೆ ನಾನು ಸ್ವರ್ಗಕ್ಕೆ ಹೋಗಲಿಕ್ಕೂ ಇಲ್ಲ. ನಿಮಗೆ ಆಟದ ವೀಳ್ಯ ಕೊಡಲಿಕ್ಕೆ ಬಿಡಲಿಕ್ಕೂ ಇಲ್ಲ.

**ಗುರುದೇವ:**—ಹಾ! ಸಮಾಧಾನಮಾಡಿ. ಎಂಥಾದ್ದು ನಿಮ್ಮ ಕರ್ಮವೋ!

**ಸೋಮು:**—ಹಾಗಾದರೆ ಹುಲಿರಾಯರ ಜೊತೆಗೆ ನಾನು ಸ್ವರ್ಗಕ್ಕೆ ಹೋಗಬೇಕೋ ಬೇಡವೋ? ಖಂಡಿತ ಹೇಳಿ.

**ಹುಲಿ:**—(ಘುರ್ರ್ರೂ ಎಂದು ಹೆದರಿಸುವುದು.)

**ಸೋಮು:**—ಹೌದಾ ಗುರುದೇವರೆ, ಈ ಹುಲಿಗೆ ಸಿಟ್ಟುಬಿಡದೆ ಸಾಧುವಾಗದೆ ಸ್ವರ್ಗಕ್ಕೆ ಹೋಗುವುದು ಹೇಗೆ? ನೋಡಿ, ಘುರ್ರ್ರೂ ಎನ್ನುತ್ತದೆ. ನನಗೂ ಇದಕ್ಕೂ ಏಕ ನಕ್ಷತ್ರವೆಂತ ಕಾಣುತ್ತದೆ.

**ಗುರುದೇವ:**—ಅದೆಲ್ಲಾ ಬಿಡಿರಿ. ಆಕಾಶವಾಣಿಗೆ ಕಿವಿಕೊಡಿರಿ.

॥ ಭಾಮಿನಿ ॥

ಹುಲಿಯೆ ಕೇಳೆಲೆ ತಲೆಯ ಬಡೆಯುತ |
ಬಳಲಿ ಸಾಯುವದೇತಕ್ಕೆನೀ |
ನೊಲಿದು ಗೊಲ್ಲನ ಗೋವ್ಗಳೆಲ್ಲವ ಕೊಡುತಲಿನೀಪೋಗು ||
ಬಳಿಕ ನಿನ್ನಯ ಬಳಗದಿದಿರಲಿ |
ಬಳಸಿ ಮುಳ್ಳಿನೊಳುರಿವ ಬೆಂಕಿಯು |
ಸಿಳಿಯೆ ಸುಟ್ಟಾ ಬೂದಿಯಿೂ ಹೊಳೆಸೇರಿ ಮೇಲಹುದೈ || ೫೧ ||

**ಹುಲಿ:**—ಏನಯ್ಯಾ ಗುರುದೇವರೆ! ಆಕಾಶವಾಣಿಯ ಅಭಿಪ್ರಾಯ ಸ್ವಲ್ಪ ಬಿಡಿಸಿ ಹೇಳುತ್ತೀರಾ?

**ಗುರುದೇವ:**— ನೀವು ಹಾಗೆಲ್ಲಾ ಸಾಯಬಾರದು. ಈ ದನವನ್ನ ಕೂಡಿಕೊಂಡು ಗೊಲ್ಲರಾಜನ ಪಟ್ಟಣವನ್ನು ಸೇರಿ, ನಿಮ್ಮ ಬಂಧುಗಳನ್ನು ಕೂಡಿ ದೊಡ್ಡ ಮೆರವಣಿಗೆಯನ್ನು ಮಾಡಿ, ಕಾಟುಮುಳ್ಳಿನ ಮೂಟೆಗೆ ಬೆಂಕಿಯನ್ನು ಹೊತ್ತಿಸಿ ಅದರ ಮೇಲೆ ಹಾರಿ ನಿಮ್ಮ ಪ್ರಾಣವನ್ನು ಬಿಡಬೇಕು. ಆ ಮೇಲೆ ನಿಮ್ಮ ದೇಹಸುಟ್ಟ ಬೂದಿಯು ಈ ಕಾವೇರಿ ಹೊಳೆಯಲ್ಲಿ ಸೇರಿದ ಕೂಡಲೇ ನಿಮಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ಇಷ್ಟೇ ಆ ಅಶರೀರವಾಣಿಯ ಅಭಿಪ್ರಾಯ.

**ಹುಲಿ:**— ಇದೊಂದು ಚಲೋ ಕಥೆ. ಬೂದಿ ಹೊಳೆ ಸೇರುವುದರಿಂದ ಸ್ವರ್ಗ ಸಿಕ್ಕುವುದು ಅಹುದೋ? ಇದು ವರೆಗೆ ಯಾರಿಗಾದರೂ ಸಿಕ್ಕಿದ್ದುಂಟೋ? ಆ ಮಾತು ಸುಳ್ಳಲ್ಲವೋ?

**ಗುರುದೇವ:**— ಹೌದನಾ ತುಂಡುಸೋಮಾರಿ, ನೀನು ಗಟ್ಟಿಗನೆಂತ ಹೇಳುತ್ತಿಯಲ್ಲ; ಈ ಹುಲಿಯ ಪ್ರಶ್ನೆಗೆ ಉತ್ತರಕೊಡು ನೋಡುವ.

**ಸೋಮ:**— ಬೂದಿ ಹೊಳೆಸೇರಿ ಒಬ್ಬಿಬ್ಬರಲ್ಲ, ಅರುವತ್ತು ಸಾವಿರ ಮಂದಿ ಸ್ವರ್ಗಕ್ಕೆ ಹೋದ ಕಥೆ ನನಗೆ ಗೊತ್ತುಂಟು. ಆದರೆ ಈ ಹುಲಿ ಸ್ವರ್ಗಕ್ಕೆ ಹೋಗಬೇಕಾದರೆ ಬಹಳ ಕಷ್ಟ ಉಂಟು. ಯಾಕಂದರೆ ಅರಿಷಡ್ವರ್ಗಗಳಲ್ಲಿ ಒಂದಾದ ಸಿಟ್ಟು ಈ ಹುಲಿಗೆ ಗಟ್ಟಿಯಾಗಿ ಉಂಟು. ನನ್ನನ್ನು ಕಂಡ ಕೂಡಲೇ ಗೊರ್‌ಗೊರ್ರೆನ್ನುತ್ತದೆ. ಇನ್ನು ಮುಂದೆ ನಾನು ಹೇಳಿದ ಹಾಗೆ ಕೇಳುವುದಾದರೆ ಮಾತ್ರ ಈ ರಾಯರು ಆ ಕಥೆ ಹೇಳ್ಯಾರು. ಇಲ್ಲವಾದರೆ ಊಹು!

**ಹುಲಿ:**— ಇಲ್ಲಪ್ಪಾ, ಸಿಟ್ಟನ್ನು ನಿನ್ನೆಯೇ ಬಿಟ್ಟಿದ್ದೇನೆ. ನೀನು ಹೇಳಿದ ಹಾಗೆ ಕೇಳುತ್ತೇನೆ.

**ಸೋಮ:**— ಹಾಗಾದರೆ ಕೇಳು ಹಿಂದೆ ಅಯೋಧ್ಯಾಧಿಪನಾದ ಸಗರನು ಯಜ್ಞದ ಕುದುರೆಯನ್ನು ಬಿಡಲು, ಆ ಕುದುರೆ ಪಾತಾಳ ಲೋಕದ ಕಪಿಲ ಋಷಿಯ ಆಶ್ರಮದ ಬಳಿಗೆ ಇಂದ್ರನಿಂದ ಸಾಗಿಸಲ್ಪಟ್ಟಿತು. ಸಗರನ ಅರುವತ್ತು ಸಾವಿರ ಮಕ್ಕಳು ಪಾತಾಳಕ್ಕೆ ಹೋಗಿ ಋಷಿಗೆ ಸಿಟ್ಟಿ

ಬ್ಬಿಸಲು ಅವನ ಕಣ್ಣು ಕಿಡಿಯಿಂದ ಎಲ್ಲರೂ ಸುಟ್ಟು ಬೂದಿಯಾದರು. ಆ ಮೇಲೆ ಸಗರನ ಮೊಮ್ಮಗನಾದ ಅಂಶುಮಂತನು ಯಜ್ಞದ ಕುದುರೆಯನ್ನು ತಂದು ಯಜ್ಞಕಾರ್ಯವನ್ನು ನೆರವೇರಿಸಿದನು. ಆ ಮೇಲೆ ಅಂಶುಮಂತನ ಮಗನಾದ ದಿಲೀಪನು ಪಟ್ಟಕ್ಕೆ ಬಂದು ಸತ್ತ ಪಿತೃಗಳಿಗೆ ಸ್ವರ್ಗವನ್ನು ಕೊಡಿಸಬೇಕೆಂದು ಗಂಗೆಯನ್ನು ತರುವುದಕ್ಕಾಗಿ ಬಹಳ ಶ್ರಮಪಟ್ಟನು. ಕೊನೆಗೆ ಈತನ ಮಗನಾದ ಭಗೀರಥನು ತನ್ನ ತಪೋಶಕ್ತಿಯಿಂದ ಬ್ರಹ್ಮರುದ್ರರನ್ನು ಮೆಚ್ಚಿಸಿ ಭಾಗೀರಥಿಯನ್ನು ಭೂಲೋಕಕ್ಕಾಗಿ ಕರತಂದು ಪಾತಾಳದಲ್ಲಿರುವ ತನ್ನ ಅರುವತ್ತು ಸಾವಿರ ಮಂದಿ ಪಿತೃಗಳ ಬೂದಿಯ ಮೇಲೆ ಹರಿಯಬಿಟ್ಟು ಅವರನ್ನೆಲ್ಲಾ ಆ ಕ್ಷಣವೇ ಸ್ವರ್ಗಕ್ಕೆ ಕಳುಹಿಸಿರುತ್ತಾನೆ. ಆ ಸ್ಥಳವೇ ಕಾಶಿ. ಅದಕ್ಕೆ ಮಹಾಸ್ಮಶಾನವೆಂತಲೂ ಹೇಳುತ್ತಾರೆ. ಅಂಥಾ ಮಹಾಶಕ್ತಿಯುಳ್ಳ ಗಂಗಾನದಿಯಲ್ಲಿ ಈಗಲೂ ಯಾರ ಭಸ್ಮ ಸೇರುತ್ತದೋ ಅವರಿಗೆ ನಿಸ್ಸಂದೇಹವಾಗಿ ಸ್ವರ್ಗಪ್ರಾಪ್ತಿಯಾಗುತ್ತದೆ.

ಭಗೀರಥನ ಕತೆ, ಗಂಗಾನದಿ, ಬಂಗಾಳಕೊಲ್ಲಿ, ಪಾತಾಳಲೋಕ, ಹಿಮಬೆಟ್ಟ ಇತ್ಯಾದಿ ಭೂಗೋಳ ವಿವರಿಸಬಹುದು.

|| ಭಾಮಿನಿ ||

ಗಂಗೆ ಬರುವಳು ತಾನು ಪಾಪಿಗ | ಅಂಗಲೇಪದಪಾಪಕಂಜುತ |
ತಿಂಗಳಲ್ಲಿ ತೊಲೆಯಲ್ಲಿ ಕಾವೇರಿಯನು ಪೊರ್ದುವಳೈ ||
ಸಿಂಗರಿಸಿ ಜನರೆಲ್ಲರಿದರೊಳು | ಗಂಗೆ ಬಂದಳು ಬಂದಿಳಿದಕೋ |
ತುಂಗೆ ಗಂಗೆ ಎನುತ್ತೆ ಮುಳುಗುತ ಸ್ವರ್ಗವೇರುವರೈ || ೫೨ ||

**ಸೋಮ:**—ಆ ಗಂಗೆಯು ಸಹ ಅನೇಕ ಪಾಪಾತ್ಮರು ತನ್ನಲ್ಲಿಸ್ನಾನ ಮಾಡುವುದರಿಂದ, ಅವರ ಪಾಪದ ಲೇಪವು ತನ್ನಲ್ಲಿ ಅಂಟಿಕೊಂಡರೆ ಮೋಸವೆಂದು, ವರ್ಷಕ್ಕೊಮ್ಮೆ ಇದೇ ತುಲಾಮಾಸದ ಸಂಕ್ರಾಂತಿಗೆ ತಪ್ಪದೆ ಹಿಮಾಲಯದಿಂದ ಗುಪ್ತಗಾಮಿನಿಯಾಗಿ ನಮ್ಮ ಈ ಕಾವೇರಿ ಹೊಳೆಗೆ ಬಂದು ಸಾನ್ನಿಧ್ಯವನ್ನು ತೋರಿಸಿ ಹೋಗುವಳು. ಆದ್ದರಿಂದಲೇ ಈ ತುಲಾ ತಿಂಗಳಲ್ಲಿ ಕಾವೇರಿಯ ಸ್ನಾನಕ್ಕಾಗಿ ಅನೇಕ ಯಾತ್ರಿಕರು

ಬಂದು ಈಗಲೂ ಸ್ನಾನವನ್ನು ಮಾಡಿ ತಮ್ಮ ಪಾಪವನ್ನು ಕಳೆದುಕೊಂಡು ಹೋಗುವರು. ಎಂದಾದ ಮೇಲೆ ಜಾಹ್ನವಿಯಂತೆಯೇ ಪವಿತ್ರಳಾದ ನಮ್ಮ ಕಾವೇರಿಯಲ್ಲಿ ನಿನ್ನ ಸುಟ್ಟ ಭಸ್ಮ ಸೇರಿದರೆ ಸ್ವರ್ಗಪ್ರಾಪ್ತಿಯಾಗುತ್ತದೆಂಬುದಕ್ಕೆ ಸಂಶಯವೇ ಇಲ್ಲ.

ದಕ್ಷಿಣ ಹಿಂದೂಸ್ಥಾನದ ಕಾವೇರಿ ನದಿ ತಲ ಕಾವೇರಿ ಇತ್ಯಾದಿ ಭೂಗೋಳ, ಚರಿತ್ರೆ ವಿವರಿಸಬಹುದು.

**ಹುಲಿ:—** ಹಾಗಾದರೆ ನೀವು ನನ್ನನ್ನು ಗೊಲ್ಲರಾಜನಲ್ಲಿಗೆ ಕರಕೊಂಡು ಹೋಗಿ ನನ್ನ ವೃತ್ತಾಂತವನ್ನೆಲ್ಲಾ ಅವರಿಗೆ ಹೇಳಿ, ನನ್ನನ್ನು ಸ್ವರ್ಗಕ್ಕೆ ಕಳುಹಿಸಿಕೊಡಬೇಕು.

**ಸೋಮ:—** ಹೌದಯ್ಯ ಗುರುದೇವರೆ, ದುಷ್ಟಜನರಿಗೂ ಒಳ್ಳೆಯದಾಗುವ ಕಾಲಕ್ಕೆ ಒಳ್ಳೆಯ ಬುದ್ಧಿ ತನ್ನಷ್ಟಕ್ಕೆ ಬರುತ್ತದೆಂಬುದಕ್ಕೆ ಈ ಹುಲಿಯೇ ದೃಷ್ಟಾಂತ ನೋಡಿ. ಅದು ನಮ್ಮ ದನವನ್ನು ಕೊಲ್ಲದೆ ಬಿಟ್ಟದ್ದು ನನ್ನ ಪೂರ್ವಪುಣ್ಯವೇ ಸರಿ. ಆದ್ದರಿಂದ ಈ ಎಲ್ಲಾ ಸಂಗತಿಗಳನ್ನು ಈ ನಮ್ಮ ರಾಜರಿಗೆ ತಿಳಿಸಿ ಹುಲಿಗೆ ಮೋಕ್ಷವನ್ನು ಕೊಡಿಸಿ, ನಾನು ದೊಡ್ಡ ಇನಾಮು ಪಡೆದುಬಿಡುತ್ತೇನೆ. ಏ ಪುಣ್ಯಕೋಟಿ ದನವೇ, ಈ ಹುಲಿಯನ್ನು ಕಿವಿಯಲ್ಲಿ ಹಿಡಿದು ರಾಜನ ಒಡ್ಡೋಲಗಕ್ಕೆ ಸರಿಯಾಗಿ ಕರೆದುಕೊಂಡು ಬಾ, ನಾನು ಮುಂದೆಹೋಗುತ್ತೇನೆ. ಗುರುದೇವರೇ ನಮಸ್ಕಾರ, ಚಮತ್ಕಾರಸ್ವಾಮಿ!

(ದನವು ಹುಲಿಯೊಡನೆ)

ಕುರುರಾಯಾ ನಿಮಗೇನು | ಮರುಳೂ ತಾಗಿತು ಇಂದು |
ಶಿರಬಾಸೆಯ ಇಟ್ಟೊ | ಬರಬೇಡೀ ನೀ ಎಂದೂ || ೫೩ ||

**ಪುಣ್ಯಕೋಟಿ:—** ಹೇ, ಕುರುಕುರ್ರೆಂದು ಕೂರುವ ಹುಲಿರಾಯರೇ, ನಾನು ಕಾಡಿಗೆ ಬರುವಾಗ ನನ್ನ ಜೀವದ ಆಸೆಬಿಟ್ಟು ಬಂದಂತೆಯೇ ನೀವೂ ನಿಮ್ಮ ಜೀವದ ಆಸೆಯನ್ನು ಬಿಟ್ಟು ನನ್ನ ಜೊತೆಗೆ ಬಂದದ್ದಾದರೆ ನಿಮಗೆ ನನ್ನಂತೆಯೇ ದೇವತಾನುಗ್ರಹವಾಗುವುದು. ಹುಚ್ಚು ಬುದ್ಧಿಯಿಂದ ಪಟ್ಟಣದವರನ್ನು ಕಚ್ಚಿನೋಯಿಸಿದರೆ ಖಂಡಿತವಾಗಿಯೂ ನೀವು ಕಲ್ಲುಗುಂಡಿನ ಬಾಯಿಗೆ ತುತ್ತಾಗಬೇಕಾದೀತು. ಜಾಗ್ರತೆ.

|| ಏಕತಾಳ ||

ಇಹದಲಿ ಆಸೆಯು ಇಲ್ಲಾ | ಬಹುಬೇಗ ನಡೆಯುವ್ಮಾ ||
ಮಹಾರಾಜನ ತೋರಮ್ಮಾ | ಬಹಳಾಸೇ ಇದೆಯುವ್ಮಾ || ೫೪ ||

**ಹುಲಿ:**—ಅಮ್ಮಾ ದನವೇ, ನಿನ್ನನ್ನು ಸಾಕಿ ಬುದ್ಧಿ ಹೇಳಿಕೊಂಡು ಬಂದ ಕಾಳಿಂಗರಾಜನ ಸಹಾಯದಿಂದ ಮುಕ್ತಿಯನ್ನು ಪಡೆಯಬೇಕೆಂಬ ಒಂದೇ ಆಸೆಯಲ್ಲದೆ, ದೇಹದ ಆಸೆಯು ನನಗೆ ಖಂಡಿತವಾಗಿಯೂ ಇಲ್ಲ. 'ಅಳಿವುದೇ ಕಾಯ ಉಳಿಯುವುದೇ ಕೀರ್ತಿ.' ಆದ್ದರಿಂದ ಆದಷ್ಟು ಬೇಗನೆ ಕರಕೊಂಡು ಹೋಗು.

|| ಏಕತಾಳ ||

ನೀನೇಯೆನ್ನಯ ಮಿತ್ರ | ಎನ್ನಯ ಸ್ವರ್ಗಕ್ಕೆ ಮಾತ್ರ ||
ನಿನ್ನಿಂದೆನ್ನಯ ಜಾತ್ರೆ | ಮುನ್ನ ವೈಕುಂಠಕೆ ಯಾತ್ರೆ || ೫೫ ||

**ಹುಲಿ:**—ಅಮ್ಮಾ, ನೀನೇ ನನಗೆ ದೇವರು ಒದಗಿಸಿ ಕೊಟ್ಟ ಪರಮ ಮಿತ್ರ. ನೀನೇ ನನ್ನ ಕಣ್ಣಿಗೆ ಹಬ್ಬ, ನನಗೆ ಸ್ವರ್ಗದ ದಾರಿಯನ್ನು ತೋರಿಸುವ ಔಷಧದ ಪಾತ್ರೆ. ಇನ್ನು ನಿನ್ನಿಂದಲೇ ನನಗೆ ವೈಕುಂಠದ ಯಾತ್ರೆಯಾದರೆ ನಾನೇ ಧನ್ಯನು. ಈಗ ನಾನು ನಿನ್ನ ಜೊತೆಯಲ್ಲಿಯೇ ಬರುತ್ತೇನೆ. ನೀನು ನಿಂತಲ್ಲಿಯೇ ನಿಲ್ಲುತ್ತೇನೆ. ನಿನ್ನ ಮಾತಿನಂತೆಯೇ ನಡೆಯುತ್ತೇನೆ. ಒಟ್ಟಾರೆ ನನಗೆ ಸ್ವರ್ಗದ ದಾರಿಯನ್ನು ತೋರಿಸಿಕೊಡು.

|| ಭಾಮಿನಿ ||

ಹಾಗೊ ಹೋಗುವ ಬನ್ನಿ ಈಗಲೆ |
ಬೇಗದಲಿ ನಾ ಕಿವಿಹಿಡಿದು ಬೆಳ |
ಗಾಗುವದರೊಳಗೈದುವೆನು ನಾ ಗೊಲ್ಲಪಟ್ಟಣವಾ ||

ಹೀಗೆ ಹೇಳುತ ದನವು ಬೇಗನೆ |
ಸಾಗತಂದಿತು ಹುಲಿಯುನಾಗಲೆ |
ಮೇಗೆ ಪೆಟ್ಟಲ ಹತ್ತಿ ಬಂದಿತು ಕೂಗಿ ಗೊಲ್ಲರನೂ || ೫೬ ||

**ಪುಣ್ಯಕೋಟಿ:**—ಹುಲಿರಾಯರೇ, ನಡೆಯಿರಿ ನೋಡುವ, ನಿಮ್ಮನ್ನು ಈ ಕಿವಿಯಲ್ಲಿ ಹೀಗೆ ಹಿಡಿದು ಕರಕೊಂಡು ನಮ್ಮ ರಾಜರ ಒಡ್ಡೋಲಗಕ್ಕೆ ಹೋಗಿ ನಮ್ಮ ಈ ಸ್ನೇಹ ಸಂಬಂಧವನ್ನು ಅವರಿಗೆ ಹೇಳಿ ನಿಮಗೆ ಸ್ವರ್ಗದ ದಾರಿಯನ್ನು ತೋರಿಸುತ್ತೇನೆ. ಧೈರ್ಯಸ್ಥರಾಗಿರಿ ಇಗೊಳ್ಳಿ ನಂಬಿಗೆ ಕೊಟ್ಟಿರುತ್ತೇನೆ.

(ಗೊಲ್ಲರಾಜನ ಒಡ್ಡೋಲಗಕ್ಕೆ ಮುಂಚೆ ತುಂಡು ಸೋಮಾರಿಯ ಪ್ರವೇಶ)

**ಸೋಮು:** — 'ಹೊಲೆಯನ ದೈವ ಹೋದಲ್ಲಿವರೆಗೆ ಎಂತ' ಹೌದಯ್ಯ ಗುರುದೇವರೇ, ನಾನು ಹೋದಲ್ಲಿವರೆಗೆ ನೀವು, ಇದ್ದೀರೋ ಹೇಗೆ? ನನ್ನ ಜೊತೆಗೆ ಸ್ವರ್ಗಕ್ಕೂ ಬರುತ್ತೀರೋ? ಹುಲಿಯ ಜೊತೆಗೆ ಧೈರ್ಯಕ್ಕೆ ನಾನು. ನಮ್ಮಿಬ್ಬರನ್ನು ಕುಣಿಸಲಿಕ್ಕೆ ನೀವು. ಒಬ್ಬ, ಇಬ್ಬ, ಮೂವ್ವ, ಇನ್ನು ಯಾರಾದರೂ ಊರಿನಲ್ಲಿ ಮುದುಕರಿದ್ದರೆ ಅವರನ್ನೂ ಕರಕೊಂಡು ಹೋಗುವ. ಹೊರಡಿರಿ.

**ಗುರುದೇವ:**—ಆಗಬಹುದು. ನೀವು ಬಾಗಲು ಕಾಯುವ ಕೆಲಸ ಬಿಟ್ಟು ಫಕ್ಕನೆ ರಾಜಸ್ಥಾನಕ್ಕೆ ಬರಲು ಕಾರಣವೇನು? ಎಲ್ಲಿಯಾದರೂ ಸ್ವರ್ಗಕ್ಕೆ ಹೋಗುವ ದಾರಿ ತಪ್ಪಿ ಬಂದಿರೋ ಹೇಗೆ?

**ಸೋಮು:**—ನಿನ್ನೆ ದೀಪಾವಳಿ ಅಮಾವಾಸ್ಯೆ ರಾತ್ರಿ ಖರ್ಚಾದರೂ ಹಬ್ಬದ ಕಡಬು ಖರ್ಚಾಗಿರದು. ಝಾಮುಹೊತ್ತು ಏರಿದರೂ ಅರಮನೆ ಬಾಗಲು ತೆರೆಯಲಿಲ್ಲ. ನನಗೊಂದು ಉಪಕಾರಮಾಡಬೇಕು. ನಮ್ಮ ರಾಜರನ್ನು ಒಡ್ಡೋಲಗಕ್ಕೆ ಬರಮಾಡಿಸಿ ಕೊಡಬೇಕು. ನಾನು ಬಾಗಿಲು ತಟ್ಟುತ್ತೇನೆ. ಲಕ್ಕಣ, ನೀನು ಎರಡು ಕೇಕೆ ಹಾಕು. ದೊಂಡ್ಯ, ಚಂಡೆ ಹೊಡಿ.

॥ ಭಾಮಿನಿ ॥

ಇಂದು ಹಬ್ಬದ ಪಾಡ್ಯದಿನವಿದು । ಬಂಧುಬಳಗಗಳೆಲ್ಲ ಕೂಡುತ ।
ಚಂದದಿಂದಲಿ ಮಂದಿಕೂಡಿಸಿ ನಾಟ್ಯವಾಡಿಸುವೇ ॥
ಎಂದು ಒಡ್ಡೋಲಗದಿ ನುಡಿಯುವ । ಸಂದು ಮುಗಿಯುವ ಸಮಯ ನೋಡುತ ।
ಬಂದೆಬಂದನು ತುಂಡುಸೋಮುನು ತನ್ನ ಹಾಸ್ಯದಲೀ ॥ ೫೭ ॥

(ಕಾಳಿಂಗನ ಒಡ್ಡೋಲಗ)

**ಕಾಳಿಂಗ:**—ಅಯ್ಯಾ ಗುರುದೇವರೇ ಇಂದು ಬಲಿಹಬ್ಬದಪಾಡ್ಯದ ದಿನ. ಸುದಿನ. ಆದ್ದರಿಂದ ಇಂದಿನ ಒಡ್ಡೋಲಗದಲ್ಲಿ ಶೀವಿಯಿಂದ ಇದ್ದು, ಬಂಧು, ಬಳಗ, ಪರಿವಾರ, ಪುರಜನ ಎಲ್ಲವರಿಗೂ ಸಂತೋಷ ಪಡಿಸುತ್ತೇನೆ ನೋಡಿ. ಎಲಾ ಚಾರಕ, ಏನಾದರೂ ವಿಶೇಷವಾರ್ತೆ ಇದ್ದರೆ ಹೇಳು.

**ಚಾರಕ:**—ಹುಜೂರ್ ಬುದ್ಧಿ! ನಮ್ಮ ಹಟ್ಟಿಯ ಕೋಟೆಯ ಬಾಗಲು ಕಾಯುವ ತುಂಡುಸೋಮಾರಿ ಬಂದು ಬಹಳ ಗಲಾಟೆ ಎಬ್ಬಿಸುತ್ತಾನೆ ಸ್ವಾಮಿ.

**ರಾಜ:**—ಕೂಡಲೇ ಅವನನ್ನು ಒಳಗೆ ಕರಕೊಂಡು ಬಾ.

**ಚಾರಕ:**—ಎಲಾ ತುಂಡುಸೋಮ, ರಾಜರ ಅಪ್ಪಣೆಯಾಗಿದೆ,— ಕೂಡಲೇ ಒಳಗೆ ಬಾ.

**ತುಂಡು ಸೋಮಾರಿ:**-(ಪ್ರವೇಶಿಸಿ) ಮಹಾರಾಜ್, ಅಕ್ಡ್‌ದಿಂ, ದಿಂ, ಸಲಾಂ! ಸಲಾಂಥ್ವರಿ, ದವಲತ್‌ಧ್ವರೀ ನೀನೇ ಧೊರಿ. ನೃಪಕೇಸರಿ, ನಿನಗ್ಯಾರ್ ಸರಿ, ಅವನೇ ಸರಿ, ಇವನೇ ಸರಿ, ಪಾಯುಸ ಸುರಿ.

**ರಾಜ:**—ಹೌದನಾ ಕಳ್ಳ, ಕೋಟೆ ಬಾಗಲು ಕಾಯುವ ಕೆಲಸ ಬಿಟ್ಟು ಇಲ್ಲಿಗ್ಯಾಕೆ ಬಂದಿಯೋ?

**ಸೋಮ:**—ಇಂದು ಹಬ್ಬದ ಪಾಡ್ಯವಲ್ಲವೋ? ನಿಮ್ಮ ರಾಣಿಯಮ್ಮನವರು, ನಂಗೆ ಗೂಡು ಕಡುಬು, ಆಲಕ್ಕಿ ಪಂಚಜ್ಜಯ್ಯ, ಎಲ್ಲಾ ಕುಡೋಕಿದ್ದಾರೆ. ಕೊಂಡು ಹೋಪ್ಕೆ ಬಂದೆ ಕಾಣಿ, ಮತ್ತು ಕೋಟೆಯ ಬಾಗ್ಲಾಗೆ ಒಂದು ಹುಲಿ ಬಂತು. ಮತ್ತು ಒಂದು ದನ ಆದನ್ನು ತಿಂತು ಸ್ವಾಮಿಯೋರೆ.

**ರಾಜ:**--ಎಲ್ಲರೂ ಸಂಜೆಗೆ ಹೆಂಡ ಕುಡಿಯುತ್ತಾರೆ. ಇವನು ಬೆಳಿಗ್ಗೆ ಕುಡಿದು ಬಂದ ಹಾಗೆ ಕಾಣುತ್ತದೆ. ಇವನ ಜೆನ್ನಿಗೆ ಸರಿಯಾಗಿ ನಾಲ್ಕು ಚಡಿ ಹೊಡೆದು ಬಿಟ್ಟು ಬಿಡಿರಿ. ನಡಿ ಆಚೆಗೆ.

**ಸೋಮು:**—ಹೀಗೆ ಹೊಡ್ಯೋಕೆ ನಾ ಮಾಡಿದ ತಪ್ಪೇನು ಸ್ವಾಮಿ?

**ರಾಜ:** — ಹುಲಿಯನ್ನು ದನ ತಿಂದಿತೆಂದು ಹೇಳಿದಿಯಲ್ಲ.

**ಸೋಮು:**—ಹುಲಿಯನ್ನು ದನ ತಿಂದಿತು ಕರತಂದಿತು ಎಂದು ಹೇಳಿದೆ.

**ರಾಜ:**—ಹೌದನಾ ಮರುಳ, ಹುಲಿಯನ್ನು ದನ ಕರತರುವುದು ಎಲ್ಲಿಯಾದರೂ ಉಂಟೇನೋ?

**ಸೋಮು:** – ಹಾಗಾದರೆ ತುಂಡು ಸೋಮಾರಿ ಹಬ್ಬದ ಪಾಡ್ಯ ವಾಗಿ ಸುಳ್ಳು ಹೇಳುವುದುಂಟೋ? 'ಪ್ರತ್ಯಕ್ಷಕ್ಕೆ ಪ್ರಮಾಣ ಯಾಕೆ?' ಈಗಲೇ ಹುಲಿಯನ್ನು ಕಿವಿಯಲ್ಲಿ ಹಿಡಿದು ಎಳೆದು ತರುವ ದನವನ್ನು ತೋರಿಸಿದರೆ ನನಗೇನು ಕೊಡುತ್ತೀರಿ? ಮುಂಚೆ ಹೇಳಿ.

**ರಾಜ:** —ನಿನಗೆ ಮೂರು ಪವನಿನ ಆರು ಮೆಡ್ಲು ಕೊಡುತ್ತೇನೆ.

**ಸೋಮು:** — ಹಾಗಾದರೆ ಈಗಲೇ ಕರತರುತ್ತೇನೆ. ಹೇ, ಎಲ್ಲರೂ ದಾರಿಬಿಟ್ಟು ದೂರ ಸರಿದು ನಿಲ್ಲಿರಿ. ಹುಲಿ ಬಂದೀತು. ನಿಮ್ಮನ್ನು ಕೊಂದೀತು. ಜಾಗ್ರತೆ. ಪುಣ್ಯಮ್ಮ, ಅಂಬೇ! ಬಾ! ಹೇ! ಮಾಮಣ್ಣ, ಇದೇ ನಮ್ಮ ರಾಜನ ಅರಮನೆ. ನೋಡಿ ಸ್ವಾಮಿ, ಕರತಂದಿದ್ದೇನೆ.

**ರಾಜ:**—ಹೌದೆನಾ, ಇದು ನಮ್ಮ ಪುಣ್ಯಕೋಟಿ ದನ. ಇದಕ್ಕೆ ಈ ಹುಲಿ ಎಲ್ಲಿ ಸಿಕ್ಕಿತು?

**ಸೋಮು:**—ಹುಲಿ ಇರುವುದು ಎಲ್ಲಿ? ಕಾಡಿನಲ್ಲಿಯೇ ಸಿಕ್ಕಿತು.

**ರಾಜ:**—ಅದು ಹೇಗೋ?

**ಸೋಮು:**— ಇನ್ನು ಹೇಳಬೇಕಾದರೆ ನನ್ನ ಇನಾಮು ಮುಂಚೆ ಇಟ್ಟುಬಿಡಿ. ಹಾಗೆಲ್ಲ ನನಗೆ ನೆನಪು ಹೋಗೋಕ್ಕಿಲ್ಲ.

**ರಾಜ:**—ಇಗೋ ನಿನಗೆ ಮೆಡ್ಲು.

**ಸೋಮು:**— ಈ ಚಿನ್ನದ ಮೆಡ್ಲು ಒಲೆಗೆ ಹಾಕಿರಿ. ನಾನು ಉಂಡು ತಿಂದು ಮಲಗಲಿಕ್ಕೆ ಯೋಗ್ಯವಾದ ಒಂದು ತುಂಡು...! ಕೊಡಿರಿ.

**ರಾಜ:**—ಓಹೋ ಗೊತ್ತಾಯಿತು, ಕಂಬಳಿಯೇ! ಒಂದಲ್ಲ, ಎರಡು ಮೂರು ತೆಗೆದುಕೊಳ್ಳು.

**ಸೋಮು:**—ಈ ಛಳಿಗೂ ಈ ಕಂಬಳಿಗೂ, ಆ ದನಕ್ಕೂ ಆ ಹುಲಿಗೂ ಗಂಟು, ನಾನು ಹೋಗುತ್ತೇನೆ.

**ರಾಜ:**—ಎಲ್ಲಿಗೆ ಹೋಗುತ್ತಿ? ಇದರ ಪೂರ್ಣ ಸಮಾಚಾರವನ್ನು ತಿಳಿಸಿ ಹೋಗು.

**ಸೋಮು:**—ಹಾಗಾದರೆ ಎರಡು ಕಿವಿಗಳಿಂದ ಕೇಳಿ. ಈ ದಿನ ನಮ್ಮ ದನ ಓಡುತಿತ್ತು. ಆಗ ನಾನು ತಡೆದೆ. ನನ್ನನ್ನು ತಪ್ಪಿಸಿ ಓಡಿತಯ್ಯಾ ಓಡಿತು. ನಾನೂ ಓಡಿದೆ; ಕಡೆಗೆ ಕಾಡಿಗೆ ಹೋಯ್ತು. ಈ ಹುಲಿಗೆ ಎದೆ ಕೊಟ್ಟು ನಿಂತಿತು. ತಿನ್ನು ತಿನ್ನು ಎಂದು ಕೂಗಿತು. ಹುಲಿ, ತನ್ನನ್ನೇ ತಿನ್ನು ಎಂದು ಆರ್ಭಟಿಸಿತು. ಕೊನೆಗೆ ಹುಲಿ ಬಂದದ್ದು ನಮ್ಮ ದನದ ಕಾಲ ಬುಡದಲ್ಲಿ ತಲೆ ಬಡೆದುಕೊಂಡದ್ದು. ಇದನ್ನು ನೋಡಿ ನಾನು ಹಾಗೇ ಬಿಡಲಿಲ್ಲ. ಆ ದೀವಟಿಗೆ ಗಂಡಿನ ಕಾಲ ಬುಡ ದಲ್ಲಿ ಮಂಡೆ ಹೊಡೆದುಕೊಂಡದ್ದು. ಇದಕ್ಕೆ ನೋಡಿ ನನ್ನ ತಲೆ ಬೋಳಾದ್ದೆ ರುಜು, ಸಾಕ್ಷಿ ಈ ಗುರುದೇವರು. ಇಷ್ಟಾಗುವಾಗ ಆಕಾ ಶದಲ್ಲಿ ಅಶರೀರವಾಣಿ ಕೇಳಿತು. ಅದರಂತೆ ದನವೂ ಹುಲಿಯೂ ಸ್ನೇಹಿ ತರಾಗಿ ಬಂದಿದ್ದಾವೆ. ಈ ಹುಲಿಯನ್ನು ನೀವೇ ಸ್ವರ್ಗಕ್ಕೆ ಕಳುಹಿಸ ಬೇಕಂತೆ. ನಿಮ್ಮಿಂದ ಆಗದಿದ್ದರೆ ಹೇಳಿ; ನಾನು ಸುಲಭವಾಗಿ ಕಳು ಹಿಸಿ ಬಿಡುತ್ತೇನೆ.

**ರಾಜ:**—ಹೌದನಾ, ನಿನ್ನ ಅಷ್ಟು ಸುಲಭವಾದ ಸ್ವರ್ಗ ಯಾವದು? ಬೇಗ ಹೇಳು.

**ಸೋಮು:**—ಸ್ವಾಮಿ ನಮ್ಮ ಕಾವೇರಿ ಬೆಟ್ಟದ ಜೋಗು ಇದೆ ಯಷ್ಟೆ. (ಆಕಾಶ ಗಂಗೆ) ಅಲ್ಲಿಗೆ ಈ ಹುಲಿಯನ್ನು ಹೀಗೆ ಬಾಲದಲ್ಲಿ ಹಿಡಿದು ಬುರುಬರು ಎಳೆದುಕೊಂಡು ಹೋಗುವುದು. ಕೈಕಾಲು ಕಟ್ಟಿ ಜೋಗಿನ ಮೇಲಿನಿಂದ ಹೊತ್ತು ಕೆಳಗೆ ಹಾಕಿ ಬಿಡುವುದು. ಇದೇ ಸುಲಭ ಉಪಾಯ. ಒಂದು ಕ್ಷಣದೊಳಗೆ ಸ್ವರ್ಗ.

**ರಾಜ:**—ಹೌದನಾ, ಹುಚ್ಚ! ಹಾಗೆ ಹಾಕಿದರೆ, ಸ್ವರ್ಗಕ್ಕೆ ಹೋಗುವುದೋ ಪಾತಾಳಕ್ಕೆ ಹೋಗುವುದೋ?

**ಸೋಮ:**—ಓಹೋ! ಸ್ವರ್ಗ ಅಂದರೆ ಮೇಲೆಯೇ? ಮೇಲೆ ಕಳುಹಿಸುವ ಕೆಲಸ ನನ್ನಿಂದಾಗದು ಸ್ವಾಮಿ, ನಾನು ಹೋಗುತ್ತೇನೆ.

॥ ಭಾಮಿನಿ ॥

ಎಲೆಲೆ ಗೋವೆಲೆ ಏನು ಚೋದ್ಯವು ।
ಹುಲಿಯ ತಂದಿಹೆ ಹೇಗೆ ಹೇಳೆಲೆ ।
ಭಲೆಭಲೇ ನಿನಗಾರು ಸರಿಯುಹರಿಹರು ಮೂಜಗದೀ ॥
ನೆಲಕೆ ಸೋಜಿಗವಪ್ಪ ತೆರದಲಿ ।
ಬಲೆಯು ಬೀಸಿದೆ ಹುಲಿಗೆ ಮಂತ್ರವ ।
ಸಲಿಗೆಯಲಿ ಕರತಂದೆ ಕಲಿಯುಗಕಿನ್ನು ನೀಧನ್ಯೆ ॥ ೫೮ ॥

**ರಾಜ:**—ಎಲೇ ಪುಣ್ಯಕೋಟಿಯೇ, ಇದೇನು ಆಶ್ಚರ್ಯ! ಈ ಕಾಡು ಹುಲಿಯನ್ನು ಹೇಗೆ ನಾಡಿಗೆ ಕರತಂದೆ? ಇದೇಕೆ ನಿನ್ನನ್ನು ಕೊಲ್ಲದೆ ಬಿಟ್ಟಿತು? ಯಾವ ತರದ ಮೋಹದ ಬಲೆಯನ್ನು ಬೀಸಿ ಇದನ್ನು ಹಿಡಿದೆ? ಅದಕ್ಕೂ ನಿನಗೂ ಸ್ನೇಹವನ್ನು ಗಂಟಿಕ್ಕಿದ ಮಹಾತ್ಮನು ಯಾರು? ಭಲೆ ಭಲೆ! ಹುಲಿಯನ್ನು ಈ ಕಲಿಯುಗದಲ್ಲಿ ಇಷ್ಟು ಸಲಿಗೆಯಿಂದ ಕರತಂದ ಮಹಾತ್ಮರು ಬೇರೆಯಾರಿದ್ದಾರೆ? ಆದ್ದರಿಂದ ನೀನೇ ಧನ್ಯಳು. ಸಜ್ಜನರ ಸ್ನೇಹವನ್ನು ಮಾಡುವವರೂ ಧನ್ಯರು. ಇನ್ನು ಈ ವಿಚಾರವನ್ನೆಲ್ಲಾ ಕೂಲಂಕಷವಾಗಿ ನನಗೆ ತಿಳಿಸು. ನೀನು ಹೇಳಿದಂತೆ ನಡಿಸುತ್ತೇನೆ. ನಿನ್ನ ಮನಸ್ಸಂತೋಷ ಪಡಿಸುತ್ತೇನೆ.

॥ ಭಾಮಿನಿ ॥

ಹಿಂಡಿನಲಿ ನಾಹಿಂದೆ ಬೀಳಲು । ಕಂಡು ಈ ಹುಲಿ ಎನ್ನನಾಗಲೆ ।
ದಿಂಡುಗೆಡೆವೆನು ಎನುತ ಬೇಗನೆ ಬಂದು ಬೆದರಿಸಲೂ ॥
ಗಂಡು ಕರುವಿಗೆ ಮೊಲೆಯನುಣ್ಣಿಸಿ ।
ಖಂಡಿತವು ನಾಬರುವೆನೆನುತಲಿ । ಹಿಂಡ ಸೇರಿದೆ ಕಂಡು ಎಲ್ಲರ
ಮನವ ಸಂತೈಸೀ ॥ ೫೯ ॥

॥ ಸಾರವಿ—ಏಕತಾಳ ॥

ಒಡನೆಯೆ ಭಾಷೆಯನುಳಿಸಲುಪೋದೆನು | ಕಡೆಗಾಹುಲಿಯೆಡೆಗೆ |
ಬಡೆಯಲು ಹುಲಿ ತಲೆ ಅಂಬರವಾಣಿಯು | ಹೊಡೆಯಿತು ಅದು
ಕಿವಿಗೇ ॥ ೬೦ ॥

**ಪುಣ್ಯಕೋಟಿ:**—ರಾಜಾ! ನಾನು ಹಿಂಡಿನಲ್ಲಿ ಹಿಂದೆ ಬಿದ್ದು ಒಬ್ಬಳೇ ಬರುತ್ತಿರುವ ಸಮಯದಲ್ಲಿ, ಈ ಹುಲಿಯು ನನ್ನನ್ನು ತಿಂದು ಬಿಡುತ್ತೇನೆಂದು ಅಡ್ಡ ಕಟ್ಟಿತು. ಆಗ ನಾನು ಹಟ್ಟಿಗೆ ಹೋಗಿ ಕರುವಿಗೆ ಮೊಲೆಕೊಟ್ಟು ಬಂದು ನಿನ್ನ ಬಾಯಿಗೆ ಬೀಳುತ್ತೇನೆ ಎಂದು ಭಾಷೆ ಕೊಟ್ಟು ಅಂತೆಯೇ ನಡಿಸಲಾಗಿ ಈ ಹುಲಿಗೆ ನನ್ನ ಮೇಲೆ ಕರುಣೆ ಹುಟ್ಟಿತು. ಹೀಗೆ ನನ್ನ ಸತ್ಯಸಂಧತೆಯ ದೆಸೆಯಿಂದ ಹುಲಿಯು ನನ್ನನ್ನು ಕೊಲ್ಲುವುದಕ್ಕೆ ಬದಲಾಗಿ ತನ್ನ ಪ್ರಾಣವನ್ನು ತೆಗೆದುಕೊಳ್ಳುವೆನೆಂದು ನನ್ನ ಕಾಲಬುಡದಲ್ಲಿ ತಲೆ ಬಡೆದುಕೊಂಡಿತು. ಅಷ್ಟರಲ್ಲಿ 'ಏ ಹುಲಿಯೇ! ನೀನು ದನವನ್ನು ಕೂಡಿಕೊಂಡು ರಾಜರಲ್ಲಿಗೆ ಹೋಗಿ, ಮುಳ್ಳಿನ ರಾಶಿಗೆ ಬೆಂಕಿ ಹೊತ್ತಿಸಿ ಅದರಲ್ಲಿ ಹಾರಿದಾಗ ನಿನ್ನ ಸುಟ್ಟ ಬೂದಿಯು ಕಾವೇರಿ ಹೊಳೆಯಲ್ಲಿ ಸೇರಿದ ಕೂಡಲೇ ನಿನಗೆ ಸ್ವರ್ಗಪ್ರಾಪ್ತಿಯಾಗುತ್ತದೆ' ಎಂತ ಅಶರೀರವಾಣಿಯಾಯಿತು. ಆ ಪ್ರಕಾರ ಹುಲಿಯನು ಕರತಂದಿದ್ದೇನೆ. ಆದ್ದರಿಂದ ಶಾಸ್ತ್ರೋಕ್ತವಾದ ರೀತಿಯಿಂದ, ಬ್ರಾಹ್ಮಣರ ಮುಖದಿಂದ, ಈ ಹುಲಿಯನ್ನು ಅಗ್ನಿಯಲ್ಲಿ ಹಾಕಿಸಿ, ಇದರ ಬೂದಿಯನ್ನು ಹೊಳೆಯಲ್ಲಿ ಕದಡಿಸಿದರೆ ನಿಮಗೆ ಪುಣ್ಯ ಬರುವುದು. .ಹುಲಿಗೆ ಸ್ವರ್ಗಪ್ರಾಪ್ತಿಯಾಗುವುದು. ನನ್ನ ಸತ್ಯವು ಲೋಕದಲ್ಲಿ ಮೆರೆಯುವುದು.

॥ ಮಾರವಿ—ಏಕತಾಳ ॥

ತುರುವೇ ನಿನ್ನಯ ಸತ್ಯಕೆ ಮೆಚ್ಚಿದೆ | ಕರಸುವೆಬ್ರಾಹ್ಮಣರಾ |
ಬೆರಸುತ ನಿನ್ನಯ ಬಳಗವ ಬೇಗನೆ | ಮೆರೆಸುವೆ ರಾಜ್ಯದಲಿ ॥ ೬೧ ॥

ರಾಜ:—ಪುಣ್ಯಕೋಟಿ ದನವೇ, ನಿನ್ನ ಗುಣಕ್ಕೆ ಎಣೆಯುಂಟೇ? ಶಹಭಾಸ್! ಮೆಚ್ಚಿದೆ. ಎಳ್ಳಷ್ಟು ಬಿಡದೆ ನಿನ್ನ ಮಾತಿನಂತೆ ಕೆಲಸವನ್ನು ಸಾಂಗವಾಗಿ ನಡಿಸುವೆನು. ಅದಕ್ಕಾಗಿ ಪುರೋಹಿತರನ್ನೂ, ನಿನ್ನ

ಬಳಗವನ್ನೂ, ಪುರಜನರನ್ನೂ ಈಗಲೇ ಬರಮಾಡಿಸಿ ನಿನ್ನ ಕೀರ್ತಿಯನ್ನು ಮೂರು ಲೋಕದಲ್ಲಿಯೂ ಮೆರೆಯಿಸಿಬಿಡುತ್ತೇನೆ.

॥ ಭಾಮಿನಿ ॥

ಎಲೆಲೆ ಚಾರಕ ಕರೆದು ತಾರೆಲೆ |
ಹೊಳೆಯು ಆಚೆಯು ಹಳೆಯು ಶಾಸ್ತ್ರಿಯು |
ಬಳಿಕ ಆಕಳ ಪೂಜೆಗನುಗೊಳಿಸೆಲ್ಲ ಸಾಧನವಾ ||
ಭಳಿರೆ ಹೋಗೆಲೆ ಬೇಗದಲಿ ನೀ |
ಹಳ್ಳಿಪಳ್ಳಿಗಳಲ್ಲಿ ಸಾರುತ |
ಗಳಿಗೆಯೊಳಗೀ ಸ್ಥಳಕೆ ಗೊಲ್ಲರ ಜೇಗದಲಿ ಕರಸೂ || ೬೨ ||

**ರಾಜ:**—ಚಾರಕ, ಈಗಲೇ ಹೋಗಿ, ನಮ್ಮ ಪುರೋಹಿತರಾದ ಶಂಕರಶಾಸ್ತ್ರಿಗಳನ್ನು ಕರೆದುಕೊಂಡು ಬಾ. ಮತ್ತು ಎಲ್ಲಾ ಹಳ್ಳಿಪಳ್ಳಿಗಳಲ್ಲಿಯೂ ಈ ವರ್ತಮಾನವನ್ನು ಸಾರಿ ಹೇಳು. ಆ ಮೇಲೆ ಗೋಪೂಜೆಗೆ ಬೇಕಾದ ಸಕಲ ಸಾಹಿತ್ಯಗಳನ್ನು ಒದಗಿಸಿಕೊಡು.

**ಚಾರಕ:**—ಒಳ್ಳೇದು ಬುದ್ಧಿ; ಮಾಡುತ್ತೇನೆ. ಅಪ್ಪಣೆ! (ಎಂದು ಹೊರಟು ಹೋಗುವನು.)

॥ ಮಾರವಿ—ಏಕತಾಳ ॥

ಹುಲಿಯೇ ಪೋಗೆಲೆ ಬೇಗನೆಬೆರಸುತ | ಬಳಗವ ಬಾರೆಲೆನೀ ||
ಕಳಿಸುವೆ ಸ್ವರ್ಗಕೆ ನಿನ್ನನು ಮೆರೆಯೆಲೆ | ಗೊಲ್ಲರ ಸೇರುತನೀ || ೬೩ ||

**ರಾಜ:**—ಹುಲಿಯೇ, ನೀನು ಬೇಗನೆ ಹೋಗಿ ನಿನ್ನ ಬಳಗವನ್ನೆಲ್ಲಾ ಸೇರಿಕೊಂಡು ಸಂತೋಷದಿಂದ ಇಲ್ಲಿಗೆ ಬರಬೇಕು. ಇಂದು ಮಧ್ಯಾಹ್ನದ ಒಳಗೆ ನಮ್ಮ ಗೊಲ್ಲರನ್ನೆಲ್ಲಾ ಸೇರಿಕೊಂಡು ಪುರಮೆರವಣಿಗೆ ಮಾಡಿಸಿ ನಿನ್ನನ್ನು ಸ್ವರ್ಗಕ್ಕೆ ಕಳುಹಿಸುತ್ತೇನೆ. ಧೈರ್ಯಸ್ಥನಾಗು, ನಡಿ.

॥ ಮಾರವಿ—ಏಕತಾಳ ॥

ಹೊಡೆಯಿರಿ ಡಂಗುರ ಬಡಿಯಿರಿ ಡೋಲನು |
ಬಿಡದಲೆ ಊರಿನಲೀ ||

ನಡೆಯಿರಿ ತೋರಣ ಬಿಗಿಯಿರಿ ಬೇಗನೆ ।
ಕೂಡಿರಿ ನೀವಿಲ್ಲಿ ॥ ೬೪ ॥

ರಾಜ—ಎಲಾ ಬಿಕ್ಕೆ ಗೌಡ, ನಾಗಯ್ಯ, ಎಲ್ಲರೂ ಕೇಳಬೇಕು. ಈ ಕ್ಷಣವೇ ನಮ್ಮ ಕೇರಿಗಳಲ್ಲೆಲ್ಲಾ ತೋರಣ ಕಟ್ಟಿಸಿ, ಮನೆ ಮುಂಗಡೆ ರಂಗವಲ್ಲಿಗಳನ್ನು ಬರೆಯಿಸಿ, ಪಟ್ಟಣವನ್ನು ಶೃಂಗರಿಸುವಂತೆ ಡೋಲು, ನಗಾರಿ, ಕೊಂಬು, ಘಂಟಿ ಮುಂತಾದ ಘೋಷಗಳಿಂದ ಡಂಗುರ ಹೊಡೆಯಿಸಿ ಬಿಡಿರಿ. ಇಂದು ಮೆರವಣಿಗೆ—ಉತ್ಸವ ಎಲ್ಲಾ ಜರಗಬೇಕು. ಜಾಗ್ರತೆ, ಹೋಯ್! ಗುರುದೇವರೇ, ಇನ್ನು ನಾನು ಹೀಗೆ ಕುಳಿತುಕೊಳ್ಳುವುದು ಸರಿಯಲ್ಲ. ಇಂದು ಜರತಾರಿ ಕೆಲಸದ ಕವಚವನ್ನು ತೊಟ್ಟು, ವಜ್ರದ ಕಿರೀಟವನ್ನಿಟ್ಟು ಶೃಂಗರಿಸಿಕೊಂಡು ಹೊರಡಬೇಕಾಗಿದೆ. ಆದ್ದರಿಂದ ಒಳಗೆ ನಡೆದು ಬಿಡುತ್ತೇನೆ.

(ಮನೆಗಳನ್ನು ಶೃಂಗರಿಸುವ ಕ್ರಮವನ್ನು ವಿವರಿಸಬಹುದು.)

---

## ೭ ಸ್ವರ್ಗಾರೋಹಣ ಸಂಧಿ.

(ಚಾರಕ ಟೊಪ್ಪನಾಯ್ಕನ ಪ್ರವೇಶ).

**ಚಾರಕ:**—ಹೌದಯ್ಯ ಗುರುದೇವರೇ, ನಮಗೆ ಈಗ ಅಷ್ಟಮದ ಅಂಗಾರಕನ ದೆಸೆಯೆಂತ ಕಾಣುತ್ತದೆ. ಹಬ್ಬದ ದಿನವಾದರೂ ಕೂತುಕೊಳ್ಳಲಿಕ್ಕೆ ಉಂಟೋ ನೋಡಿ. ಆ ಶಂಕರ ಶಾಸ್ತ್ರಿಗಳನ್ನು ಕರೆಯಲಿಕ್ಕೆ ಹೋಗಬೇಕಂತೆ. ಹಾಗೆಂತ ಹೊರಟು ಬಂದೆ ನೋಡಿ. ಇನ್ನು ಈ ಕಾವೇರಿ ಹೊಳೆಯನ್ನು ದಾಟಿಹೋಗಬೇಕು. ಇದೊಂದು ತಡವು ಮಾಡುವ ಕಡವು. ಹೋಯ್! ಓ ಕೋಟಿ ಮರಕಲ, ಓಡ, ತೆಪ್ಪೋ, ತೆಪ್ಪೊ, ದೋಣಿ, ದೋಣಿ. ಹೋಯ್! ಬೇಗ ತಾ! ಇನ್ನೂ ಕಾಣೆ.

**ಕೋಟಿ:**—ಬಂದೇ! ಬಂದೇ! (ಬರುವನು.)

**ಚಾರಕ:**—ಈ ಕಡವಿನ ಬಾಗಿಲಲ್ಲಿ ಕೂಗಿ ಕೂಗಿ ಪ್ರಾಣಬಿಟ್ಟರೂ ನೀನು ದೋಣಿ ತರುವ ಹಾಗಿಲ್ಲ. ನಿನಗೆ ಇಷ್ಟು ತಡವೇನೋ?

**ಕೋಟಿ:**—ಸ್ವಾಮಿಯೋರೆ, ನಾನು ಆಗಲೇ ಹೊರಟಿದ್ದೆ. ನಮ್ಮನೆಯಾಗೆ ಮಕ್ಕಳ ತಂಟೆ ಬಾಳಂಬ್ರ್ಯ. ಒಂದು ಚಕ್ಕಲಿ ಬೇಕೆಂಬುದು, ಒಂದು ಜೊಂದೆಬೇಕೆಂಬುದು. ಇದೊಂದು ಇತ್ತಲೆ ಕಾಲಿನಲ್ಲಿ ಹಿಡಿದ್ದು ಬಿಡಲೇ ಇಲ್ಲ. ಇವುಗಳ್ ಬೊಬ್ಬೆಲಿ ನಮ್ಮ ಮನೆ ಹೊಕ್ಕಡೆ ಕಾಗೆ ಬಪ್ಪುಕಿಲ್ಲೆ. ಗುಂಡ್ ಹೊಡ್ದ್ರೆ ಕೆಂಬಾಂಗಿಲ್ಲೆ. ಅವುನ್ನ ಸಮಜಾಯ್ಸಿ ಬಪ್ಪುಕೆ ಇಷ್ಟು ಹೊತ್ತಾಯಿತಂಬ್ರ್ಯ ಹೋಪ ದೋಣಿ ಹತ್ತಿನಿ. ಬಂತಲೆ ಶಾಸ್ತ್ರಿಗಳ ಮನೆ, ಅವರನ್ನು ಬೇಗನೆ ಕರ ಕೊಂಡು ಬನ್ನಿ.

**ಚಾರಕ:**— (ಶಾಸ್ತ್ರಿಗಳ ಮನೆಗೆ ಹೋಗಿ) ಶಾಸ್ತ್ರಿಗಳೇ, ನಮಸ್ಕಾರ ಸ್ವಾಮಿ. ಇಂದು ನಮ್ಮ ಊರಲ್ಲಿ ಬಹಳ ವಿಶೇಷ ವಾರ್ತೆ ಇದೆ.

**ಶಾಸ್ತ್ರಿ:**—ಏನು, ಹೋಮಾಗೀಮ ಉಂಟೋ? ಅಕ್ಕಿ ಕಾಯಿ ಗಂಟು ಹೊರಲಿಕ್ಕೆ ನಮ್ಮ ಮಾಣಿಯನ್ನು ಕರಕೊಂಡೇ ಬರುತ್ತೇನೆ. ಹೋಗುವ.

**ಚಾರಕ.**—ಎಲ್ಲಾ ಉಂಟು; ಅದೆಲ್ಲಾ ಇರಲಿ. ನಿನ್ನೆಯ ಹಬ್ಬದ ಪಂಚಕಜ್ಜಾಯ, ಕಳೆದ ದಸ್ರದ ಮರ್ಯಾದೆ ಸಹ ಏನಾದರೂ ಇದ್ದರೆ ಕೊಡಿಸೋಣಾಗಲಿ ನೋಡುವ.

**ಶಾಸ್ತ್ರಿ:**—ಈ ವರ್ಷ ಕಡುಬಿಗೆ ಅಕ್ಕಿ ಅರೆಯಲಿಕ್ಕೆ ನನ್ನಾಕೆ ಮುಟ್ಟು. ಮಗಳು ಬಾಣಂತಿ. ನನಗೆ ಮನೆ ಕೆಲಸ ಮಾಡಲಿಕ್ಕೆ ಸಾಕೋ ಸಾಕಾಗುತ್ತದೆ. ದೇವರ ಸಮರ್ಪಣೆಗಾದರೂ ಎರಡು ಸೇರು ಅವಲಕ್ಕಿ ತಾ ಎಂದು ಮಾಣಿಯನ್ನು ಅಂಗಡಿಗೆ ದೂಡಿದೆ. ಇವನು ಸುದಾಮನ ಗಾದೆ ಮಾಡಿದ; ಹರಕು ಜೈರಾಸದಲ್ಲಿ ಕಟ್ಟಿಗೊಂಡು ಬಂದು ಹೊಳೆ ದಾಟಿ ಬರುವಾಗ ಜಾರಿಬಿದ್ದು ತನ್ನ ಜೊತೆಗೆ ಅದಕ್ಕೂ ಸ್ನಾನ ತೀರಿಸಿಕೊಂಡು ಮನೆಗೆ ಬಂದ. ಇಗೋ ಈ ದೋನಾಣೆ ಕಾಸು ತೆಗೆದುಕೊ. ಇದು ಎಮ್ಮೆಗೆ ಹಾಕುವ ತಿಂಡಿ ಹೋಮದ ಸಾಮಾನು ಕೊಡುವಾಗ ಸ್ವಲ್ಪ ನೆನಪಿರಲಿ. ನಾನು ಪಕ್ಕನೆ ಪ್ರಾತಃಸ್ನಾನ ತೀರಿಸಿ ಬಿಡುತ್ತೇನೆ.

॥ ಭಾಮಿನಿ ॥

ಮುಳುಗಿ ಮಿಾಯುತ ತಾನು ಹೊಳೆಯಲಿ |
ಎಳೆದು ನಾಮವ ಹೊರಟನಾಗಲೆ |
ಬಳಿಕ ತನ್ನಯ ಮಕ್ಕಳೆಲ್ಲರ ಕರೆದು ಕೂಗಿದನೂ ||
ಹಳೆಯ ಶಾಸ್ತ್ರಿಯು ಬಳಗ ಕೂಡುತ |
ಹೊಳೆಯ ದಾಟಲು ದೋಣಿಯೇರಲು |
ಕಳೆಯ ಬೇಸರ ಕೋಟಿಯಾಡಿದ ತುಂಡು ಹಾಡುಗಳಾ ॥ ೬೫ ॥

ಶಾಸ್ತ್ರಿ:—ಸ್ನಾನವಾಡಿ, ನಾಮ ಎಳೆದು, ಪೂಜೆ ಮುಗಿಸಿ ಆಯಿತು. ಇನ್ನು ಹೋಗುವ, ಮಾಣಿ, ನಮ್ಮವರನ್ನೆಲ್ಲಾ ಬರಲಿಕ್ಕೆ ಹೇಳಿ ಕರಕೊಂಡು ಬಾ. ರಂಗ, ರಾಮು, ಶಾಮು, ಭೀಮು, ಎಲ್ಲಾ ಬನ್ನಿ, ಹೋಗುವ.

ಕೋಟಿ:—ಜೇಗ ಬಪ್ಪ್ಯಲೆ ಕೂಕಣಿ, ಎಯಿಡ್ ನಿಮಿಟನಾಗೆ ಹೊಳೆದಾಟ್ಸೆ ಬಿಡ್ತೆ. ಹೋಪ.

ಚಾರಕ:—ಹ್ಞಾದನಾ ಕೋಟಿ, ಒಂದು ತಮಾಷೆ ಪದ ಹೇಳ್ ಕಾಂಬ. ನಿನ್ನ ಗ್ರಾಮ್ಯ ಕನ್ನಡ ಬೇಡ, ಶುದ್ಧ ಕನ್ನಡದಾಗೆ ಹೇಳಬೇಕು.

ಕೋಟಿ:—ಒಳ್ಳೇದು ಒಡ್ಯನೆ; ಈಗ ಮಾಡಿದ್ದು ಬಿಸಿ ಬಿಸಿ ಪದ ಹೇಳುತ್ತೇನೆ.

॥ ಅಷ್ಟತಾಳ ॥

ಏನು ಶೋಕು ಕಲಿತು ಬಿಟ್ಟಾನು |
ನನ್ನಣ್ಣ ಏನು ಶೋಕು ಕಲಿತುಬಿಟ್ಟಾನು ॥ ಪಲ್ಲ ॥
ನಿಂದೆ ಜನರ ಮಾಡಕಲಿತನು |
ಹಿಂದೆ ಮುಂದೆ ನೋಡ ಮರೆತನು ॥
ಬಂದು ಬಳಗವ ಬಯ್ಯ ಕಲಿತನು |
ತಂದೆ ತಾಯ್ಗಳ ಗುರುತು ಮರೆತನು ॥ ೧ ॥

ಉಂಡು ತಿಂದು ತಿರುಗ ಕಲಿತನು |
ಮುಂಡಾಸು ಕಟ್ಟಿ ನಡೆಯ ಮರೆತನು ||

090715

ಹೆಂಡ ಬಂಗಿ ಸೇದ ಕಲಿತನು |
ಗಂಡ ಹೆಂಡಿರ ಸ್ನೇಹ ಮರೆತನು || ೨ ||

ಬುದ್ಧಿ ಕೆಟ್ಟು ತಿರುಗ ಕಲಿತನು |
ವಿದ್ಯೆಗುರುವ ಬೇಗ ಮರೆತನು ||

ಇದ್ದ ಗದ್ದೆ ಮಾರ ಕಲಿತನು |
ಹುದ್ದೆ ವಿದ್ಯೆ ಎಲ್ಲ ಮರೆತನು || ೩ ||

ಕಾಫಿ ಕ್ರೋಪು ಶೋಕು ಕಲಿತನು |
ಕೋಪಿ ಬರೆದು ಓದ ಮರೆತನು |
ಕೋಪ ಬಹಳ ಮಾಡ ಕಲಿತನು |
ಪಾಪ ಪುಣ್ಯವೆಲ್ಲ ಮರೆತನು || ೪ ||

ಪೇಟೆ ಮೋಟರ್ ಓಟ ಕಲಿತನು |
ಹೊಟೆ ಬೇಟೆ ಎಲ್ಲ ಮರೆತನು ||

ಬೇಟು ಚೆಂಡು ಆಟ ಕಲಿತನು |
ಆಟ ಹಿಂದಿನದೆಲ್ಲ ಮರೆತನು || ೫ ||

ಹೇಸು ಜನರ ಸ್ನೇಹ ಕಲಿತನು |
ಕಾಸು ಜೋಕೆ ಮಾಡ ಮರೆತನು ||

ಮೋಸಮಾಡಿ ಓಡ ಕಲಿತನು |
ದಾಸ ಕೂಟ ಸೇರ ಮರೆತನು || ೬ ||

ಬಿಡದೆ ತಂಟೆ ಮಾಡ ಕಲಿತನು |
ಒಡೆಯ ಹಿರಿಯರನೆಲ್ಲ ಮರೆತನು ||

ಒಡನೆ ದೇವರ ಗುರುತು ಮರೆತನು |
ಕಡೆಗೆ ದಾರಿಯೊಳ್ ಬಿದ್ದು ಸತ್ತನು || ೭ ||

ಎಲ್ಲರೂ:-ಪಹಪಾ! ಭೇಷ್ ಕೋಟಿ, ಭೇಷ್! ಈಗಿನ ಕಾಲಕ್ಕೂ ನಿನ್ನ ಪದಕ್ಕೂ ಬಿಸಿ ದೋಸೆಗೆ ಹಸಿ ಬೆಣ್ಣೆ ಬಿದ್ದಂತೆ. ಗುಡ್ ಗುಡ್, ವೆರಿ ಗುಡ್!

ಶಾಸ್ತ್ರಿ:—ಪದ ಮುಗಿಯುವುದಕ್ಕೂ ಹೊಳೆ ದಾಟುವುದಕ್ಕೂ ಸರಿಯಾಯಿತು. ಇನ್ನು ರಾಜಸ್ಥಾನಕ್ಕೆ ನಡೆದುಬಿಡುವ.

|| ಕೇತಾರಗೌಳ-ಅಷ್ಟತಾಳ ||

ಹೊಳೆಯು ದಾಟುತ ಬೇಗ ಹೊಳಲಸೇರಿದನೀಗ |
ಬಳಿಕ ರಾಜನ ಕೂಡೀ||
ಗೆಳೆಯ ಶಾಸ್ತ್ರಿಯು ಬೇಗ ಕರೆದ ಕಾರಣವೇನು |
ತಿಳಿಸಿ ಈಗಲೆ ನೋಡೀ || ೬೬ ||

ರಾಜ:—ಗುರುದೇವ ನಮ್ಮ ಟೋಣ್ಪನಾಯ್ಕ ಹೋಗಿ ಗಳಿಗೆ ಎರಡು ಕಳೆಯಿತು, ಶಾಸ್ತ್ರಿಗಳ ಸವಾರಿ ಏನು ಕಾಣುವುದಿಲ್ಲ?

ಶಾಸ್ತ್ರಿ:—ಮಹಾರಾಜ್! ವಂದಿಸಿದ್ದೇನೆ. ದೀರ್ಘಾಯುಷ್ಮಂತ ನಾಗು. ದೇವರು ನಿನಗೆ ಒಳ್ಳೆಯದನ್ನು ಮಾಡಲಿ. ರಾಜಾ, ಈ ದಿವಸ ನನ್ನನ್ನು ಪಕ್ಕನೆ ಕರೆಯಿಸಿದ ಕಾರಣವೇನು?

ರಾಜ:—ಈ ದಿವಸ ನಮ್ಮ ಊರಲ್ಲಿ ಒಂದು ವಿಶೇಷ ಉತ್ಸವ ವಾಗಬೇಕಾಗಿದೆ. ಈ ದಿನ ಹೊಡಿಸಿದ ಡಂಗುರದ ಸಮಾಚಾರ ನಿಮಗೆ ತಿಳಿಯಲಿಲ್ಲವೋ? ಕೇಳಿ.

ಕೇತಾರಗೌಳ—ಅಷ್ಟತಾಳ

ಎಲೆಲೆ ಶಾಸ್ತ್ರಿಯೆ ಕೇಳು ಹುಲಿಯು ಸ್ವರ್ಗಕೆ ನೀನು ।
ಕಳುಹಿಸಿಕೊಡಬೇಕೂ ||
ಹಲವು ಸಾಮಗ್ರೀಯನುಗ್ರಾಣವೀತಂದಾ |
ಕಳಸುಪೂಜಿಸಬೇಕೂ || ೬೭ ||

ರಾಜ:—ನಮ್ಮ ಪುಣ್ಯಕೋಟಿ ದನವು ತನ್ನ ಸತ್ಯದ ಸಾಮರ್ಥ್ಯ ದಿಂದ ಒಂದು ಹುಲಿಯನ್ನು ಕರತಂದದೆ. ಆ ಹುಲಿಯು ಬಳಗ ಸೇರಿ

ಈಗ ಬರುತ್ತದೆ. ಹುಲಿ ದನಗಳನ್ನು ಕೂಡಿಸಿ ಮೆರವಣಿಗೆ ಮಾಡಿಸಿ ಮುಳ್ಳಿನ ಮೂಟೆಯನ್ನು ರಚಿಸಿ ಅದಕ್ಕೆ ಬೆಂಕಿಯನ್ನು ಹೊತ್ತಿಸಿ, ಆ ವೇಳೆ ಹುಲಿಯನ್ನು ಸುಟ್ಟು ಅದರ ಭಸ್ಮವನ್ನು ನಮ್ಮ ಕಾವೇರಿ ಹೊಳೆಗೆ ಹಾಕಬೇಕು. ಈ ಕೆಲಸ ನಿಮ್ಮಿಂದ ಆಗಬೇಕು. ಬೇಕಾದ ಸಾಹಿತ್ಯಗಳನ್ನು ಉಗ್ರಾಣದಿಂದ ತರಿಸಿಕೊಂಡು ಕೆಲಸವನ್ನು ಪೂರೈಸಿರಿ.

॥ ಕೇತಾರಗೌಳ_ಅಷ್ಟತಾಳ ॥

ಒಂದೊಂದು ಕಡೆಯಲಿ ಬಂದು ನಿಲ್ಲಲಿ ಬೇಗ ।
ಮುಂದಾಗ ಹುಲಿಗಳೆಲ್ಲ ॥
ಹಿಂದೆಲ್ಲ ದನಗಳು ಮಂದಿಮಾರ್ಬಲವೆಲ್ಲ ।
ಸಂದಣಿ ನಿಲಲೀಗ ॥ ೬೮ )

**ಶಾಸ್ತ್ರಿ:**—ಹೌದಾ ಗುರುದೇವರೇ, ಈ ವಿಶಾಲವಾದ ಹುಲ್ಲುಗಾವಲಲ್ಲಿ ಮುಂದಿನಿಂದ ದನಗಳನ್ನೆಲ್ಲ ನಿಲ್ಲಿಸಿ ಶಾಸ್ತ್ರೋಕ್ತವಾದ ರೀತಿಯಿಂದ ಈ ಅನ್ಯತಗಳಿಗೆಯು ತುಲಾಲಗ್ನದಲ್ಲಿ ಗೋಪೂಜೆಯನ್ನು ಮಾಡುತ್ತೇನೆ. ಇವುಗಳ ಹಿಂದೆ ಹುಲಿಗಳ ಬಳಗವನ್ನು ನಿಲ್ಲಿಸುತ್ತೇನೆ. ಅವುಗಳ ಆಟವನ್ನು ನೀವು ಆಡಿಸಿರಿ.

॥ ಮಾರವಿ_ಏಕತಾಳ ॥

ಚಾರಕ ತಾರೆಲೆ ಬೇಗನೆ ಪೋಗುತ | ನೂರ್ಮುಡಿ ಅಕ್ಕಿಯನೂ ॥
ಸೇರುಕಟ್ಟೆಯು ಎಣ್ಣೆಯು ಬೆಲ್ಲವ | ನೂರಾರ್ ಬಟ್ಟೆಯನೂ ॥ ೬೯ ॥

**ಶಾಸ್ತ್ರಿ:**—ಎಲೇ ಟೊಣ್ಣೆನಾಯ್ಕ, ಕೂಡಲೇ ಮುಳ್ಳಿನ ಮೂಟೆಯನ್ನು ರಚಿಸುವಂತೆ ಹೇಳು. ಉಗ್ರಾಣಕ್ಕೆ ಹೋಗಿ ಈ ಪಟ್ಟಿ ಪ್ರಕಾರ ಮೂರು ಮುಡಿ ಅಕ್ಕಿ, ತೆಂಗಿನಕಾಯಿ ನೂರು, ಬೆಲ್ಲಮಣ ೧॥, ತುಪ್ಪ ಬೇಳೆ ೩|||, ವೀಳ್ಯದೆಲೆ, ಅಡಿಕೆ, ಕರ್ಪೂರ, ಊದಿನಬತ್ತಿ ಎಲ್ಲ ನೂರಾರು ಸಾಹಿತ್ಯಗಳನ್ನು ಕೂಡಲೇ ತಾ ಹೋಗು.

(ಇಲ್ಲಿ ಸಾಮಾನಿನ ಅಂಗಡಿ ಲೆಕ್ಕಗಳನ್ನು ಕಲಿಸಬಹುದು.)

**ಚಾರಕ:**—ಎಲ್ಲಾ ತಂದು ಮಡಗಿದ್ದೇನೆ. ಬ್ರಾಹ್ಮಣರು ಬಂದಿದ್ದಾರೆ. ರಾಜರು ಹಾಜರಿದ್ದಾರೆ. ಪುರಜನರು ನೆರೆದಿರುತ್ತಾರೆ. ಪೂಜೆ ಆಗಬಹುದು.

॥ ಮಾರವಿ—ಏಕತಾಳ ॥

ತಂದಿಹ ಸಾಹಿತ್ಯಗಳನೆಲ್ಲವ | ಒಂದೊಂದೆಡೆಯೊಳಗೇ ||
ಚಂದದಿ ಮುಂದೆಲ್ಲವನಿರಿಸುತಲೀ | ಸಂದಿಸಿ ಅನಿಲನಿಗೇ || ೭೦ ||

**ಶಾಸ್ತ್ರಿ:**— ಈ ತರದ ಸಾಹಿತ್ಯಗಳಿಂದ ಮುಂಚಿತವಾಗಿ ಗೋಪೂಜೆಯನ್ನು ಮಾಡುವೆನು ಇನ್ನು ಮುಳ್ಳಿನ ರಾಶಿಗೆ ಬೆಂಕಿಯನ್ನು ಹೊತ್ತಿಸಿ ಅಗ್ನಿಪೂಜೆಯನ್ನು ಮಾಡುವೆನು. 'ಅಗ್ನಿಂ ಪ್ರಜ್ವಲಿತಂ | ಆದ್ಯಂ ಖರ್ಚಿ ಯಜಂತಂ ॥ ತಂಡುಲಂಭಕ್ಷಯತಿ | ಯಜಮಾನನ ಹೆಂಡತಿ ಕೋಪಯತಿ || ಅಗ್ನಿಯಾಯಿಸ್ವಾಹಾ | ಅನಿಲಾಯ ತನ್ನಮಮ | ಹೋಳಿಗಾಯಿಸ್ವಾಹಾ | ಹಲುವಾಯ ತನ್ನಮಮ || ವ್ಯಾಘ್ರಾಯಿಸ್ವಾಹಾ | ಹುಲಿಯಾಯ ತನ್ನಮಮ || ಇತಿ ಸಮರ್ಪಯಾಮಿ. ಹಾ, ಹುಲಿಯೇ ಇನ್ನು ನಿನಗೆ ಅಂತ್ಯಕಾಲ ಬಂತು. ಈ ಅಗ್ನಿಗೆ ಪ್ರದಕ್ಷಿಣೆ ಬಂದು ನಮಸ್ಕಾರ ಮಾಡು. ಆ ಮೇಲೆ ನಿನ್ನ ಪ್ರಾರ್ಥನೆಯೇನಾದರೂ ಇದ್ದರೆ ತಿಳಿಸು, ಅಂತೆಯೇ ರಾಜರು ನಡಿಸುತ್ತಾರೆ.

॥ ಮಾರವಿ—ಏಕತಾಳ ॥

ದಗದಗ ಉರಿಯುವ ಬೆಂಕಿಯ ನಡುವಿಗೆ |
ನಗುತಲಿ ಹಾರುವೆನೂ ||
ಜಗದಲಿ ಎನ್ನಯ ಅಂತ್ಯದ ಮಾತನು |
ಈಗಲೆ ಸಾರುವೆನೂ || ೭೧ ||

**ಹುಲಿ:**—ದಗದಗ ಉರಿಯುತ್ತಿರುವ ಈ ಬೆಂಕಿಗೆ ಹಾರುವ ಮುಂಚೆ ನನ್ನ ಕೊನೆಯ ಎರಡು ಮಾತುಗಳನ್ನು ಈ ಸಭಿಕರ ಮುಂದೆ ತಿಳಿಸಿ ಬಿಡುತ್ತೇನೆ.

॥ ಭಾಮಿನಿ ॥

ಸತ್ತ ನಮ್ಮಯ ತೊಗಲನುಗುರನು |
ಎತ್ತಿತಮ್ಮಯ ಹಟ್ಟಿಯೊಳಗಿಡೆ |
ಮತ್ತೆ ಅಲ್ಲಿಗೆ ತಟ್ಟದೆಂದುಂ ಕ್ಷುದ್ರತರ ಬಾಧೆ ||
ಮತ್ತು ದನಗಳು ಹೆಚ್ಚು ಕರೆವುವು|

ಬಿತ್ತಿ ಬೆಳೆಗಳು ಬೆಳೆದು ಬರುವುವು|
ಅತ್ತುಕೊಳ್ಳುವವರುಗಳೆಲ್ಲರು ನಗುತಮೋದಿಪರೂ || ೭೨ ||

**ಹುಲಿ:**— ಅಯ್ಯಾ, ನಾನು ಸತ್ಯಮಾತೆಯಾದ ದನಕ್ಕಾಗಿ ದೇಹವನ್ನು ಸಮರ್ಪಿಸುತ್ತೇನೆ. ಇನ್ನು ಮುಂದಕ್ಕೂ ಕಾಲಕಾಲಕ್ಕೂ ಎಲ್ಲರ ಹಟ್ಟಿಯಲ್ಲಿದ್ದ ದನಗಳನ್ನು ರಕ್ಷಿಸಬೇಕೆಂಬ ಆಸೆ ಇದೆ. ಆದ್ದರಿಂದ ಇಂದಿನಿಂದ ಯಾರು ನಮ್ಮ ಚರ್ಮವನ್ನು ತಮ್ಮ ತಮ್ಮ ಹಟ್ಟಿಯಲ್ಲಿಟ್ಟು ವರ್ಷಕ್ಕೊಮ್ಮೆ ಈ ಹಬ್ಬವನ್ನು ಇಂದಿನಂತೆಯೇ ಆಚರಿಸುತ್ತಾ ಬರುತ್ತಾರೆಯೋ ಅವರು ಕಟ್ಟಿದ್ದಲ್ಲಿ ದನಗಳು ಬೇಕಾದಷ್ಟು ಹಾಲು ಕರೆದು, ಬಿತ್ತಿದಲ್ಲಿ ಬೆಳೆಬೆಳೆದು ಸಂತೋಷದಿಂದ ಬಾಳಿ ಬರುತ್ತಾರೆ; ಮತ್ತು-

|| ಭಾಮಿನಿ ||

ಮುಂದೆ ಮೇಸುವ ಹುಡುಗರಾಟಕೆ|
ಚಂದ ತೋರುವ ಶಾಲೆಬಾಲರ|
ವೃಂದಕತಿ ಮಾಧುರ್ಯ ತೋರುವ ತೆರದೆ ರಾಜ್ಯದಲೀ ||
ಮುಂದೆ ಉಡುಪಿಯ ಪಡುವಲೋರ್ವನು |
ಅಂದು ಬರೆಯಲಿ ನನ್ನ ಚರಿತೆಯ |
ಇಂದು ಸೂರ್ಯರು ಇರುವ ವರೆಗದು ಮುಂದೆ ಬಾಳಿರಲಿ. || ೭೩ ||

**ಹುಲಿ:**—ಅಲ್ಲದೆ ಈ ನನ್ನ ಚರಿತ್ರೆಯನ್ನು ಎಳೆ ಮಕ್ಕಳ ಮನಸ್ಸಿನಲ್ಲಿ ನೆಲೆಗೊಳ್ಳುವಂತೆ ಸುಲಭ ಶೈಲಿಯಲ್ಲಿ ಮಾಧುರ್ಯಯುಕ್ತವಾಗಿ ಉಡುಪಿಯ ಪಡುವಲಿಗಿರುವ ಅಂಬ್ಲಪಾಡಿಯ ದೇವಿಯ ಸೇವಕನೊಬ್ಬನು ಮಕ್ಕಳ ಪ್ರಸಂಗರೂಪವಾಗಿ ಬರೆಯಲಿ. ಅದರಿಂದ ಲೋಕಕ್ಕೆ ಮಂಗಳಪ್ರಾಪ್ತಿಯಾಗಲಿ ಎಂದು ಸಹ ಅಗ್ನಿದೇವರನ್ನು ಪ್ರಾರ್ಥಿಸಿಕೊಂಡು ಈ ಜಡದೇಹವನ್ನು ಈಗ ಅಗ್ನಿದೇವತೆಗೆ ಸಮರ್ಪಿಸುತ್ತೇನೆ. ಲೋಕಕ್ಕೆ ಶಾಂತಿಯಾಗಲಿ.

|| ಭಾಮಿನಿ ||

ಪೂಜೆಗೋಸುಗ ತರಿಸಿಯೆಲ್ಲವ | ಮೂಜಗವು ಮೆಚ್ಚುವಂದದಿ |
ಸಾಜದಿಂ ವಿಧಿಗೊಂಡು ಪೂಜೆಯ ಗೈದನಾಶಾಸ್ತ್ರಿ||

ಪೂಜೆ ಮುಗಿಯಲು ಶಾಸ್ತ್ರಿವರ್ಯರ |
ಸೋಜಗದಿ ನೋಡಿತ್ತು ಜನವದು |
ರಾಜನಾಗಲಿ ಹುಲಿಯ ಬೂದಿಯ ತೇಲಿಸಿದ ಹೊಳೆಗೇ || ೭೪ ||

ರಾಜ– ಎಲೈ ಶಾಸ್ತ್ರಿಗಳೇ, ನಿಮಗೆ ಯೋಗ್ಯವಾದ ಈ ದೊತ್ರವನ್ನು ಉಡುಗೊರೆ ಕೊಟ್ಟಿರುತ್ತೇನೆ. ನೀವು ಈ ದಿನ ಮಾಡಿದ ಗೋಪೂಜೆ, ಅಗ್ನಿಪೂಜೆ ಉತ್ಸವವು ಎಲ್ಲರ ಮನಸ್ಸಿಗೂ ಬಹು ಆನಂದವನ್ನು ಉಂಟು ಮಾಡಿತು. ಇನ್ನು ಈ ಭಸ್ಮವನ್ನು ಕಾವೇರಿ ಹೊಳೆಗೆ ಹಾಕಿರಿ. ಹಾಗೂ ಹುಲಿಯು ಸ್ವರ್ಗಕ್ಕೆ ಹೋದ್ದನ್ನು ಕಂಡು ನಾನು ಧನ್ಯನಾಗುವೆನು.

ಝಂಪೆ ೨ನೇ ತಾಳ.

ಪೊಡವಿಯಲಿ ಈ ಹಬ್ಬ ಎಡೆಬಿಡದೆ ನಡೆವಂತೆ |
ಕೊಡಿರೀಗ ಪ್ರಕಟಣೆಯಾನೀಗ |
ಅಡಿಗಡಿಗೆ ನೀವೆಲ್ಲ ಬಿಡದೆ ಮಾಡಿರಿ ಬೇಗ |
ಪಡೆಯಿರೀ ಸೌಖ್ಯವನು ಬೇಗ || ೭೫ ||

ರಾಜ:—ಶಾಸ್ತ್ರಿಗಳೇ, ಇಂದಿನ ಬಲಿಪಾಡ್ಯದ ದಿನವು ಗೋಪೂಜಾ ಪಾಡ್ಯದಿನವಾಗಿ ಬಹಳ ಸಂಭ್ರಮದಿಂದ ನೆರವೇರಿತು. ಇನ್ನು ಮುಂದೆಯೂ ಈ ಉತ್ಸವವು ನಮ್ಮ ಕರ್ನಾಟಕ ಹಾಗೂ ತುಳುನಾಡಿನಲ್ಲಿ ಪ್ರತಿವರ್ಷವೂ ಸಾಂಗವಾಗಿ ನಡೆಯಬೇಕೆಂತಲೂ, ಇದರಿಂದ ರಾಜ್ಯದಲ್ಲಿ ಪ್ರಜೆಗಳಿಗೆ ಒಳ್ಳೆ ಫಲವೇ ದೊರಕುತ್ತದೆಂತಲೂ ಮುಂತಾಗಿ ಅನೇಕ ಪದ್ಯರೂಪವಾಗಿ ಪ್ರಕಟಣೆಯನ್ನು ಪ್ರಕಟಿಸಿ, ರಾಜ್ಯಕ್ಕೆ ಎಲ್ಲಾ ವಿಷಯಗಳಲ್ಲಿಯೂ ಮಂಗಳವು ಪ್ರಾಪ್ತಿಯಾಗುವಂತೆ ದೇವರನ್ನು ಪ್ರಾರ್ಥಿಸಿಕೊಳ್ಳಿರಿ.

ಶಾಸ್ತ್ರಿ:– ಗುರುದೇವ, ನನಗೆ ಛಂದಃಶಾಸ್ತ್ರ ತಿಳಿಯದು. ಅಕ್ಕಿಕಾಯಿ ಸಿಕ್ಕಿದ್ರೆ ಸಾಕು. ಈ ದೋತ್ರ ನಿಮಗೇ ಉಡುಗೊರೆ ಕೊಡುತ್ತೇನೆ. ನಮ್ಮ ರಾಜರಿಗೆ ಸಂತೋಷವಾಗುವಂತೆ ಚಂದಮಾಡಿ ಒಂದು ಪ್ರಕಟಣೆಯ ಪದ್ಯವನ್ನು ಹಾಡಿರಿ ಆ ಮೇಲೆ ಮಂಗಳಾರತಿ ಮಾಡಿ ವೀಳ್ಯ ತೆಗೆದುಕೊಳ್ಳಿರಿ.

## ಪ್ರಕಟಣೆಯ ಪದ್ಯ. |ಭಾಮಿನಿ|

ಇಳೆಯೊಳೆಲ್ಲರು ತುಲೆಯಮಾಸದಿ | ಹೊಳೆಯಲೀ ಕಾವೇರಿಯಲಿ ಸಲೆ |
ಮುಳುಗಿಮೊಯುತ ಬಲಿಯ ಪಾಡ್ಯದ ಹಬ್ಬದಾ ದಿನದೀ ||
ಗಳಿಗೆ ನೋಡುತ ಧೇನುಪೂಜೆಯ | ಬಳಿಕ ಪುರಜನ ಕೂಡಿಗೈಯುತ |
ಮುಳ್ಳಿನೊಳಗುರಿಸುತ್ತೆ ಬೆಂಕಿಯ ವಿವಿಧ ಸಂಭ್ರಮದೀ || ೭೬ ||

ಹುಲಿಗಳಾಟವನೆಲ್ಲನಾಡಿಸಿ | ನಲಿವತುರುಕರುಗಳನು ಸೇರಿಸಿ |
ಒಲಿಸಿಕೊಳ್ಳಲು ಬೇಕುದೇವರಗೊಲ್ಲರಾಜ್ಯದಲೀ ||
ಕಾಲಕಾಲಕೆ ನಿಮ್ಮ ಗೋವಿಗೆ| ಹುಲ್ಲುಮೇವ್ಗಳನೆಲ್ಲನಿರಿಸುತ |
ಲೀಲೆಮಿಗೆ ಗೋಸೇವೆಗೈವುದು ಧರಣಿ ಇರುವನಕಾ || ೭೭ ||

ಪುಣ್ಯಕೋಟಿಯು ಪುಣ್ಯಕಥೆಯಿಂ ಮಣ್ಣುಗೂಡುವುದೆಲ್ಲಪಾಪವು |
ಕಣ್ಣುಕಟ್ಟುಗಳೆಲ್ಲ ಪರಿಹೃತವಪ್ಪುವವರಿಂದಾ ||
ಸಣ್ಣಮಕ್ಕಳು ಜಾಣರಪ್ಪರು | ಚನ್ನವಪ್ಪುದದೆಲ್ಲ ಕಾರ್ಯವು |
ಹೆಣ್ಣು ಹೊನ್ನುಗಳೆಲ್ಲ ಬರುವುವು ಗಣನೆ ಇಲ್ಲದಲೇ || ೭೮ ||

ಸತ್ಯಕಥೆಯಿದು ನಿತ್ಯಪಠಿಸಲು | ಮೃತ್ಯುತೊಲಗುವ ಸ್ತುತ್ಯಭಾವದಿ |
ನಿತ್ಯಪಾಠವ ಕಲಿಸಿ ಆಟವನಾಡಿಸಿರಿ ನೀವೂ ||
ನಿತ್ಯಮುತ್ತೈದೆಯರು ಬಾಳ್ವರು | ಹತ್ಯದೋಷಗಳೆಲ್ಲಪೋಪವು |
ಸ್ತುತ್ಯೆಕಾತ್ಯಾಯನಿಯು ಕಾವಳು ಮತ್ತೆ ಮಂಗಳದೀ || ೭೯ ||

## ಮಂಗಲಪದ

ಉಡುಪಿಯ ಪುರದೊಳು ಮೆರವವಗೇ |
ಹಡಗಿನೊಳಗಿನಿಂದ ಬಂದವಗೇ ||
ಬಿಡದಲೆ ಮಧ್ವರಿಗೊಲಿಯುತ ನಿಂದಗೆ |
ಪೊಡವಿಗೊಡೆಯ ಶ್ರೀ ಕೃಷ್ಣನಿಗೇ || ೮೦ ||

— ಸಂಪೂರ್ಣ. —

# ಹಿನ್ನುಡಿ

ಶಾಲೆಗಳ ಗಾಳಿಕೋಳಿ ನುಡಿಯುತಾಯಿತೇ! ಹೌದು! ನಾನು ಮಧ್ಯರಾತ್ರಿಗೊಮ್ಮೆ ಬೆಳಗಿನ ಝಾವಕ್ಕೊಮ್ಮೆ ಬೆಳಗೊಮ್ಮೆ ಹೀಗೆ ಕೂಗಿ ನಾಡಿನ ಬೇಸಾಯಗಾರರ ಗಡಿಯಾರದಂತೆ ಹಿಂದಿನಿಂದ ಇಂದಿನ ವರೆಗೂ ಕಾಲಕ್ಕೆ ಸರಿಯಾಗಿ ಜನಜಾಗೃತಿ ಹುಟ್ಟಿಸುತ್ತಿರುವವನೆಂದು ಕೂಗಿತು ಕೋಳಿ ಕೊ ಕೊಕೋಕೋ!!

ಈಗ ನಮಗಂತು ಸ್ವರಾಜ್ಯ, ರಾಮರಾಜ್ಯವಾಗಬೇಕು. ಹಿಂದಿನ ಹಿರಿಯರ ವಿದ್ಯಾಭ್ಯಾಸ ಕ್ರಮವೇ ಬರಬೇಕು. "ಕ್ರೀಡಾಪದ್ಧತಿ" ಆರು ವರ್ಷದಿಂಡ 12 ವರ್ಷದ ಮಕ್ಕಳಿಗೂ ಈ ಕ್ರಮವೇ ಜಾರಿಯಲ್ಲಿ ಬರ ಬೇಕು, ಎಂದು ಕೂಗಿತು ಕೋಳಿ ಕೊ ಕೊಕೋಕೋ!!

ಹಳ್ಳಿಯ ಮಕ್ಕಳು ಒಳ್ಳೆಯ ಜಾಣರು. ಬಯಲಲ್ಲಿ ಒಬ್ಬನು ಡಬ್ಬಿ ಬಡೆಯುವನು. ಒಬ್ಬನು ಪದ ಹಾಡುವನು. ಮತ್ತೊಬ್ಬನು ಎದೆ ಅಗಲ ವಾಗುವಂತೆ ಕುಣಿಯುವನು. ಕೂಡಲೇ ಮತ್ತೊಬ್ಬನೊಡನೆ "ಎಲಾ ಕೌರವಾ, ಇತ್ತ ಕೇಳು. ನಾನು ಭೀಮ ಬಂದಿದ್ದೇನೆ, ಮಾಡು ಯುದ್ಧ" ಎಂದು ತುದಿಮೊದಲಿಲ್ಲದೆ ಪರಾಕ್ರಮದ ಮಾತುಗಳಿಂದ ಸಂಭಾಷಣೆ ಮಾಡುವನು. ಇದೇ ಅವರ ಪೂರ್ವವಾಸನೆಯುಳ್ಳ ವಿದ್ಯಾಭ್ಯಾಸಕ್ರಮ ಎಂದು ಕೂಗಿತು ಕೋಳಿ ಕೊ ಕೊಕೋಕೋ!!

ಈಗ ಬರಬೇಕಯ್ಯ ಅದೇ ಕ್ರಮ. ಒಂದು ಹೊತ್ತು ಶಾಲೆ, ಒಂದು ಹೊತ್ತು ಆಟವ ಮೇಲೆ, ಆಡುವ ಹಾಡುವ ಪ್ರಸಂಗ. ಒಂದೊಂದೇ ಮಕ್ಕಳ ಪ್ರಸಂಗ ಮುಂದೆ! ಎಂದು ಕೂಗಿತು ಕೋಳಿ. ಕೊ ಕೊಕೋಕೋ!!

ಇನ್ನು ಉಪಾಧ್ಯಾಯರೆಲ್ಲ ಒಕ್ಕಟ್ಟಾಗಿರಿ. ನಿಮ್ಮ ಮಕ್ಕಳು ಜಾಣ ರಾಗಬೇಕಾದರೆ ಶಿಕ್ಷಣಗಾನಕ್ಕೆ ತಳಕಟ್ಟು ಹಾಕಿರಿ. ಮಕ್ಕಳ ಪ್ರಸಂಗಗ ಳನ್ನು ಸಂಗ್ರಹಿಸಿ ಕಲಿಸಿರಿ ನಿಮ್ಮ ಮಕ್ಕಳು ತಮ್ಮಷ್ಟಕ್ಕೆ ತಾವೇ ಕತೆ,

ಹಾಡು, ಅರ್ಥ, ಸಂಭಾಷಣೆ, ವಿಷಯಜ್ಞಾನ ಹಾಸ್ಯ, ಶಾರೀರಿಕಶಿಕ್ಷಣ, ಬರಹ ಉಕ್ತಲೇಖನ ಮುಂತಾದ್ದನ್ನು ಏಕಕಾಲದಲ್ಲಿ ಕಲಿತು ರಾಷ್ಟ್ರದ ಮುಂದಿನ ಮುಂದಾಳುಗಳಾಗುವರು ಎಂದು ಕೂಗಿತು ಕೋಳಿ. ಕೊ ಕೊಕ್ಕೋಕೋ!!

ಕಂಡ್ಯಾ ಮಹಾರಾಜ!

ಈ ಕೋಳಿಯ ಕೂಗಿಗೆ ಮನಮೆಚ್ಚಿ ನಾನು ಈ ಪುಸ್ತಕವನ್ನು ನವಯುಗ ಪ್ರೆಸ್ಸಿನ ಶ್ರೀ ಕೆ. ಹೊನ್ನಯ್ಯ ಶೆಟ್ಟರ ಸಹಕಾರದಿಂದ ಮತ್ತೊಮ್ಮೆ ಅಚ್ಚುಹಾಕಿಸಿದೆನು. ಇದರ ಸರ್ವ ಭಾರವನ್ನು ಹೊತ್ತ ಪ್ರಕಾಶಕರಿಗೆ ನಾನು ಆಭಾರಿಯಾಗಿದ್ದೇನೆ. ಈ ಪುಸ್ತಕವು ಎಲ್ಲರ ಮೆಚ್ಚಿಗೆಗೆ ಪಾತ್ರವಾಗಿ ಮಕ್ಕಳ ವಿದ್ಯಾಭ್ಯಾಸವು ಈ ಕ್ರಮದಲ್ಲಿ ದಿನೇ ದಿನೇ ಹೆಚ್ಚು ಅಭಿವೃದ್ಧಿಗೆ ಬರಲೆಂದು ಕಾಳಿಕಾ ದೇವಿಯನ್ನು ಪ್ರಾರ್ಥಿಸುವೆನು! ಮತ್ತು ಮರೆಯದೆ ನನ್ನ ಬಾಲ್ಯ ಗುರುಗಳಾದ ಆದಿಯುಡ್ಪಿ ಶಾಲಾ ಮೆನೇಜರ್ ಶ್ರೀ ಟಿ. ಸೀತಾರಾಮಯ್ಯನವರಿಗೂ, ನನಗೆ ಮಕ್ಕಳ ಕೃತಿಗಳನ್ನು ಬರೆಯುವುದಕ್ಕೆ ತಕ್ಕ ಜ್ಞಾನಮಾರ್ಗವನ್ನು ಉಪದೇಶಿಸಿದ ದಿವಂಗತ ಗುರುವರ್ಯರಾದ ಪಂಜೆ ಮಂಗೇಶರಾಯರಿಗೂ ಈ ಪುಸ್ತಕವನ್ನು ಸಮರ್ಪಿಸಿರುತ್ತೇನೆ.

ಅಂಬಲಪ್ಪಾಡಿ ಶಾಲೆ
ತಾ. 14-4-56

ಕೆ. ಮುಖ್ಯಪ್ರಾಣ ಉಪಾಧ್ಯಾಯ.

# ಪುರಾವುಶೇಗಾನಿ

ಮನೆಯಲ್ಲಿ ಕಾಹಿಲೆಯಾದರೆ ಕಳವಳವೇಕೆ?

ಮನೆಯಲ್ಲೇ "ಮನೆ ಮದ್ದು" ಇದ್ದರೆ ಗಾಬರಿಯೇಕೆ?

# ಮನೆ ಮದ್ದು

ಬರೆದವರು: ಡಾ| ಕೊರಡ್ಕಲ್ ವೆಂಕಟ್ರಾವ್, ಎಲ್. ಐ. ಎಮ್.

"*Ably written- Quite up-to-date valuable service*"

ಎಂದು ಗವರ್ನಮೆಂಟ್ ಇಂಡಿಯನ್ ಮೆಡಿಕಲ್ ಕಾಲೇಜಿನ ಮಾಜಿ ಪ್ರಿನ್ಸಿಪಾಲ್ **ವೈದ್ಯರತ್ನ ಕೇಪ್ಟನ್ ಜಿ. ಶ್ರೀನಿವಾಸ ಮೂರ್ತಿ,** ಎಮ್. ಬಿ. ಸಿ. ಎಮ್. ಇವರು ಮುನ್ನುಡಿಯಲ್ಲಿ ಕೊಂಡಾಡಿದ್ದಾರೆ.

ಮಕ್ಕಳ, ಹೆಂಗಸರ, ಗರ್ಭಿಣಿಯರ, ಇತರ ಎಲ್ಲಾ ಸಾಮಾನ್ಯ ಕಾಹಿಲೆಗಳಿಗೂ ಮನೆಯಲ್ಲೇ ಮದ್ದು ಮಾಡುವ ವಿಧಾನವು ವಿವರಿಸಲ್ಪಟ್ಟಿದೆ. ಹೆರಿಗೆ ವಿಧಾನ ಸವಿಸ್ತಾರವಾಗಿ ವಿವರಿಸಲ್ಪಟ್ಟಿದೆ.

ಬೆಲೆ: ರೂ. ೨—೦—೦. (ಟ. ಖರ್ಚು ಬೇರೆ.)

ನಿಮ್ಮಷ್ಟಕ್ಕೆ ನೀವೇ ಇಂಗ್ಲಿಷ್ ಕಲಿಯಬೇಕೆಂದಿದ್ದರೆ—

ದಿ| ಶ್ರೀ ಕೊರಡ್ಕಲ್ ಶ್ರೀನಿವಾಸರಾಯರಿಂದ ವಿರಚಿತವಾದ –

# ಸುಲಭದಲ್ಲಿ ಇಂಗ್ಲಿಷ್

ಎಂಬ ಆಂಗ್ಲ ಸ್ವಯಂಬೋಧಿನಿಯನ್ನು ಇಂದೇ ತರಿಸಿಕೊಳ್ಳಿರಿ.

**ವಿದ್ಯಾರ್ಥಿಗಳಿಗೂ ವಯಸ್ಕರಿಗೂ ಅತ್ಯಂತ ಅನುಕೂಲವಾದ ಆಂಗ್ಲ ಸ್ವಯಂಬೋಧಿನಿ.**

ಬೆಲೆ:— ರೂ. ೧—೮—೦. (ಟ. ಖರ್ಚು ಬೇರೆ)

ವಿಕ್ರಯಾಧಿಕಾರಿಗಳು:—ನವಭಾರತ ಪುಸ್ತಕ ಭಂಡಾರ, ಉಡುಪಿ.

ಹುರಾವರ್ಣಗಾನಿ

# ಏಶಿಯದ ಸಂಪತ್ತು

(ಏಶಿಯದ ಆರ್ಥಿಕ ಸ್ಥಿತಿ ಚಿತ್ರ)

ಬರೆದವರು: ಕು. ಶಿ. ಹರಿದಾಸ ಭಟ್ಟ, ಎಂ. ಎ.

ಇಂದಿನ ರಾಜಕೀಯದಲ್ಲಿ ಚರ್ಚಾಸ್ಪದ ಭೂಖಂಡವಾದ ಏಶಿಯದ ರಾಜಕೀಯ ಮತ್ತು ಆರ್ಥಿಕ ಸ್ಥಿತಿಚಿತ್ರವನ್ನು ಸರಳವಾಗಿಯೂ, ವಿಶದವಾಗಿಯೂ, ಸಚಿತ್ರವಾಗಿಯೂ ವಿವರಿಸುವ ಏಕಮಾತ್ರ ಗ್ರಂಥ

**ಏಶಿಯದ ಎಲ್ಲ ವಿದ್ಯಾರ್ಥಿಗಳೂ, ರಾಜಕೀಯಜ್ಞರೂ, ಓದಬೇಕಾದ ಪುಸ್ತಕ. ಬೆಲೆ: ಎರಡು ರೂಪಾಯಿ.**

**ಸಿಗುವ ಸ್ಥಳ:— ನವಭಾರತ ಪುಸ್ತಕ ಭಂಡಾರ ಉಡುಪಿ.**

○

ಬಂಗಾರದಂತಹ ಪುಸ್ತಕವೆಂದು ಸಮಗ್ರ ಕರ್ನಾಟಕದ ಪತ್ರಿಕಾ ಪ್ರಪಂಚದಿಂದ ಪ್ರಶಂಸಿಸಲ್ಪಟ್ಟ ಹೊಸ ಬಗೆಯ ಗ್ರಂಥ

# ಬದುಕು ಬಂಗಾರ

(ಬರೆದವರು: ಕುಮಾರಸ್ವಾಮಿ)

**ಹೊಸ ಬಗೆಯ ಗ್ರಂಥ.**

ಪುಟಗಳು: ೧೫೮. ಬೆಲೆ: ರೂ. ೧—೪—೦.

**ಪ್ರತಿಗಳಿಗೆ ಬರೆಯಿರಿ:**

**ನವಯುಗ ಪ್ರೆಸ್, ಉಡುಪಿ.**

---

ನವಯುಗ ಪ್ರೆಸ್, ಉಡುಪಿ.

500/14-7-1956.